ಶ್ರೀ

ಫಲ ಜ್ಯೋತಿಷ್ಯ ಜ್ಯೋತಿರ್ಮಾಲಾ — ನಕ್ಷತ್ರ : ೩

# ಸಾಡೇಸಾತಿ


ಲೇಖಕರು :

ಶ್ರೀ. ಎನ್. ಕೆ. ಜೋಗಳೇಕರ

ಧಾರವಾಡ.





ಪ್ರಕಾಶಕರು

ಎನ್. ಕೆ. ಜೋಗಳೇಕರ

೩-೭ ತೇಜಸ್ವಿನಗರ

ಕಲಘಟಗಿ ರೋಡ

ಧಾರವಾಡ-೨ ೫೮೦ ೦೦೨

[ ಬೆಲೆ - ಹತ್ತು ರೂಪಾಯಿಗಳು ]

ಪ್ರಕಾಶಕರು :
ಡಾ॥ ಎನ್. ಕೆ. ಜೋಗಳೇಕರ
೩-೭೨ ತೇಜಸ್ವಿನಗರ,
ಕಲಘಟಗಿ ರೋಡ,
ಧಾರವಾಡ - ೨
೫೮೦ ೦೦೨

ಪ್ರಥಮಾವೃತ್ತಿ : ೧೯೫೯
ದ್ವಿತೀಯಾವೃತ್ತಿ : ೧೯೬೪
ತೃತೀಯಾವೃತ್ತಿ : ೧೯೭೭
ಚತುರ್ಥಾವೃತ್ತಿ : ೧೯೮೭



ಬೆಲೆ : ೧೦ /- ರೂಪಾಯಿಗಳು.

ಮುದ್ರಕರು :
ಸೌ. ಜಗದೇವಿ ಅ. ಹೊನ್ನಾಪುರಮಠ
ಚಂದ್ರೋದಯ ಮುದ್ರಣಾಲಯ
ಧಾರವಾಡ-೧

# ಪ್ರಸ್ತಾವನೆ

ಶ್ರೀ. ಜೋಗಳೇಕರರು ಶನಿಯ ೭॥ದ ಬಗ್ಗೆ ಬರೆದ ಈ ಪುಸ್ತಕಕ್ಕೆ ನಾಲ್ಕು ಪ್ರಾಸ್ತಾವಿಕ ಮಾತುಗಳ ಪ್ರಸ್ತಾವನೆ ಬರೆಯಲು ವಿಜ್ಞಪ್ತಿ ಮಾಡಿಕೊಂಡಿದ್ದರಿಂದ, ಈ ಕಾರ್ಯಕ್ಕೆ ನಾನು ಪ್ರವೃತ್ತವಾಗಿರುವೆ. ಕಥೆ-ಕಾದಂಬರಿಗಳಂತಹ ಸುಲಭವಾಙ್ಮಯವನ್ನು ಬೇಡುವ, ಇಂದಿನ ವಾಚಕವರ್ಗಕ್ಕೆ ಶಾಸ್ತ್ರೀಯ ವಾಙ್ಮಯದ ಕಟು ಕಷಾಯವನ್ನು ನೀಡುವದು ಸಾಹಸದ ಕಾರ್ಯವೇ ಸೈ! ಈ ಕಾರ್ಯವನ್ನು ಶ್ರೀ. ಜೋಗಳೇಕರರು ತರುಣ ವಯಸ್ಸಿನಲ್ಲಿಯೇ ಮಾಡಲಿಕ್ಕೆ ಕಟಿಬದ್ಧರಾಗಿರುವರು. ಇನ್ನು ಜ್ಯೋತಿಷ್ಯವು ಶಾಸ್ತ್ರವೇ ಅಲ್ಲವೆನ್ನುವ ಮಹಾನುಭಾವರು ಇರುವರು. ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ; ಚಂದ್ರಾರ್ಕೌ ಯತ್ರ ಸಾಕ್ಷಿಣೌ; ಇದು 'ವೇದಾಂಗ'. "ಮೂರ್ಧನಿಸ್ಥಿತಂ, ಎಂಬ ಪೂರ್ವಜರ ಘೋಷಣೆಗಳು ರಾಜದ್ರೋಹಿಗಳ ಘೋಷಣೆಗಳಂತೆ ನಿರರ್ಥಕವಾಗಿವೆ. ಇಂತಹ ವಾತಾವರಣವಿರುವಾಗ ಇಂದಿನ ಪ್ರಜಾಸ್ವಾಮ್ಯದ ಯುಗದಲ್ಲಿ ಜ್ಯೋತಿಷ್ಯದ ಸದಭಿರುಚಿಯನ್ನು ಹುಟ್ಟಿಸುವ ಗ್ರಂಥಗಳು ದೇಶಭಾಷೆಗಳಲ್ಲಿ ಬರಬೇಕಾಗಿವೆ.

ಮರಾಠಿಯಲ್ಲಿ, ದಿವಂಗತರಾದ ಗೋಪಾಳ ವಿಷ್ಣು ನವಾಥೆ, ಜೀವನರಾವ ಚಿಟ್ನೀಸ ಮೊದಲಾದ ವಿದ್ವಾಂಸರು ಜ್ಯೋತಿಷ್ಯದವಿಚಾರಪರಿಪೂರಿತ ಪುಸ್ತಕಗಳನ್ನೂ ಲೇಖನಗಳನ್ನೂ ಬರೆದು ಜನರಲ್ಲಿ ಶಾಸ್ತ್ರದ ಬಗ್ಗೆ ಆದರ ಹುಟ್ಟಿಸಿದರು, ಸುಶಿಕ್ಷಿತರಲ್ಲಿ ಈ ಶಾಸ್ತ್ರದ ಬಗ್ಗೆ ಇರುವ ಅನಾದರವನ್ನು ಚದುರಿಸಿದರು. ಗುಜರಾತದ ನವಸಾರಿಯಲ್ಲಿರುವ ಶ್ರೀ ಮಾಧವೀ ವಸಂತರು ಮುಂಬೈಯ ಯಶವಂತ ಕೇಶವ ಪ್ರಧಾನರೂ ಈ ಶಾಸ್ತ್ರದ ಬಗ್ಗೆ ಉತ್ತಮ ಗ್ರಂಥಗಳನ್ನು ಬರೆದಿರುವರು. ಕನ್ನಡದಲ್ಲಿ ಈ ಕಾರ್ಯವನ್ನು ಇನ್ನೂ ಮಾಡಬೇಕಾಗಿದೆ. ಮೈಸೂರು ಭಾಗದಲ್ಲಿ ಕೆಲವು ಗ್ರಂಥಗಳು ಕನ್ನಡದಲ್ಲಿ ಸಿಗುತ್ತಿದ್ದರೂ ಇಲ್ಲಿ ಉತ್ತರ ಕರ್ನಾಟಕದಲ್ಲಿ ಸಾಮಾನ್ಯ ಜನರಿಗ ಅಲ್ಲಿಯ ಭಾಷೆಯಲ್ಲಿ ಶೈಲಿಯಲ್ಲಿ ಇನ್ನೂ ಅಷ್ಟೊಂದು ಅಭಿರುಚಿ ಹುಟ್ಟಿರುವದಿಲ್ಲ. ಜ್ಯೋತಿಷ್ಯವು ಮೊದಲೇ ಶಾಸ್ತ್ರೀಯ ವಿಷಯ. ಭಾಷೆಯ ವೈಚಿತ್ರ್ಯಗಳಿಂದ ಗ್ರಂಥ

ಗಳು ಲೋಕಪ್ರಿಯವಾಗುವದೂ ಮಾರಾಟವಾಗುವದೂ ಕಠಿಣ ವಿಷಯವಾಗಿ ರುವದು; ಕಾರಣ ಮಾರ್ಗಶೋಧನಕ್ಕಾಗಿ ಇಂದಿನ ಪ್ರಕಾಶಕರು ಸಾಹಸ ಮಾಡಬೇಕಾಗಿರುವದು.

ಜ್ಯೋತಿಷ್ಯ ಕೇಳದಿರುವವರು, ಅದರಲ್ಲಿ ಕುತೂಹಲವಿಲ್ಲದವರು ವಿರಲ. ಪ್ರತಿಷ್ಠಿತರು ಏಕಾಂತದಲ್ಲಿ ಕೇಳುವರು, ಇತರರು ಲೋಕಾಂತ ದಲ್ಲಿ; ಇಷ್ಟೇ ಭೇದ. ಆದರೆ ಸಂಶೋಧನಾತ್ಮಕ ಅಭ್ಯಾಸಕ್ಕೆ ಸಹಾಯ ಮಾಡುವವರು ತೀರ ವಿರಳ. 'ದಾತಾ ಭವತಿ ವಾ ನವಾ.'

ಶ್ರೀಮಾನ್ ಜೋಗಳೇಕರರು ಈ ಪುಸ್ತಕವನ್ನು ಬರೆದಿರುವದು ಜನರಲ್ಲಿ ಬರಿದ ಭಯವನ್ನು ಹುಟ್ಟಿಸುವದಕ್ಕಾಗಿ ಅಲ್ಲ; ಜನರಲ್ಲಿ ಶಾಸ್ತ್ರದ ಕಾಠಿಣ್ಯದ ಕಲ್ಪನೆ ಬರಲಿ, ಈ ಶಾಸ್ತ್ರಾಭ್ಯಾಸ ಕುತೂಹಲವು ಹುಟ್ಟಲಿ ಎಂಬ ಸದುದ್ದೇಶ ದಿಂದ ಬರೆದಿರುವರು.

ಇನ್ನು ಶನಿಯ ಬಗ್ಗೆ ಹೇಳಬೇಕಾದರೆ ಅವನು ಖಲಗ್ರಹ ಎನ್ನುವದು ನಿಜ. ಅವನಲ್ಲಿ ಸದ್ಗುಣಗಳೇ ಇಲ್ಲವೆಂದು ಭಾವಿಸಬಾರದು. ಅವನು ಜನ್ಮ ಕುಂಡಲಿಯಲ್ಲಿ ನೀಚ ರಾಶಿಯಲ್ಲಿದ್ದರೆ, ಇತರ ಗ್ರಹಗಳ ಪೀಡಿತನಿದ್ದರೆ ಪರಮಾವಧಿ ಪೀಡೆಯನ್ನು ಕೊಡುವನು. ಕಲಹ, ಕಾರಸ್ಥಾನ, ವಿನಾಶ, ಶೈತ್ಯಬಾಧೆಯಿಂದುಂಟಾಗುವ ರೋಗಗಳು, ಮಾನವನ ಅಥವಾ ದೇಶದ ಇಲ್ಲವೆ ಜನಾಂಗದ ಅಧಃಪಾತ ಮೊದಲಾದ ಮಹಾ ಅನರ್ಥಕಾರಿಯಾದ ಕಾರ್ಯಗಳನ್ನು ಮಾಡುವನು. ಆದರೆ ಇಂತಹ ಮಹಾ ಅನರ್ಥಗಳನ್ನುಂಟು ಮಾಡುವಾಗ ಮಂಗಳ, ರಾಹು, ಶನಿಗಳಂತಹ ಗ್ರಹಗಳೊಂದಿಗೆ ಅಶುಭ-ಯೋಗದಲ್ಲಿರುವಾಗ ಈ ಅನರ್ಥಗಳು ಶಿಖರಕ್ಕೆ ಮುಟ್ಟುತ್ತವೆ.

ಶನಿ ಉಚ್ಚ ರಾಶಿಯಲ್ಲಿ ಗ್ರಹಗಳ ಶುಭದೃಷ್ಟಿಯಲ್ಲಿದ್ದಾಗ ಅವನು ಉತ್ತಮ ಫಲಗಳನ್ನು ಕೊಡುವನು. ಶನಿಯು ವಾಯುರಾಶಿಯಲ್ಲಿ ಬುದ್ಧಿ, ಶಕ್ತಿ, ತತ್ವಜ್ಞಾನ ಮೊದಲಾದ ಫಲಗಳನ್ನು ಕೊಡುವನು. ಪೃಥ್ವಿ ರಾಶಿಯಲ್ಲಿ ಭೂದಾನವನ್ನು ಮಾಡುವನು. ಜಲ ರಾಶಿಗಳು ಅವನಿಗೆ ಅಪ್ರಿಯವಾದವು. ಅಗ್ನಿ ರಾಶಿಗಳಲ್ಲಿ ಮೇಷವಂತೂ ನೀಚ, ಸಿಂಹ ಶತ್ರುಕ್ಷೇತ್ರ, ಧನು ಗುರು ವಿನ ರಾಶಿಯಾದ್ದರಿಂದ ಅವನ ಉಗ್ರ ಸ್ವರೂಪ ತೋರುವದಿಲ್ಲ, ಇಷ್ಟೇ.

ಜ್ಯೋತಿಷ್ಯ ಶಾಸ್ತ್ರದಲ್ಲಿ ಸತ್ಯವನ್ನು ಕಂಡುಹಿಡಿಯುವದು ಬಹಳೇ ಕಷ್ಟಸಾಧ್ಯವಾಗಿರುವದು. ಕಾವ್ಯದಲ್ಲಿಯಂತೆ ದ್ರಾಕ್ಷಾಪಾಕ, ನಾರೀಕೇಳ ಪಾಕಗಳಿರುವದಿಲ್ಲ. ಆದರೆ ಇದು ಕಟುವಾದ ಔಷಧ, ಆರೋಗ್ಯಕ್ಕಾಗಿ. ಜೀವನ ಕಲಹದ ಜಟಿಲತೆಯನ್ನು ಸೌಮ್ಯ ಮಾಡಿಕೊಳ್ಳುವದಕ್ಕಾಗಿ ವಾಚಕರು ಈ ಶಾಸ್ತ್ರದ ಪರಿಚಯ ಮಾಡಿಕೊಳ್ಳಬೇಕು.

ಪ್ರಸಿದ್ಧ ಪಾಶ್ಚಾತ್ಯ ಜ್ಯೋತಿರ್ವಿದರಾದ ಅಲನ್ ಲಿಯೋ ಇವರು 'Saturn the reaper' ಎಂಬ ಗ್ರಂಥವನ್ನು ಬರೆದಿದ್ದು, ನಿಮ್ಮ ಜೀವನದ ಸುಗ್ಗಿಯನ್ನೆಲ್ಲ ಹಾಳುಮಾಡಿಬಿಡುವ ಗ್ರಹವೆಂದು ಶನಿಯನ್ನು ಕರೆದಿರುವರು. ಕಾರಣ ಶನಿಯು ೭॥ ಎಂದರೆ ನಮ್ಮಲ್ಲಿಯೂ ಹೆದರುತ್ತಾರೆ. ೭॥ ಎಂದರೆ ೩೦ ವರ್ಷಕ್ಕೊಮ್ಮೆ ಬರುತ್ತದೆ. ಜನ್ಮವೇ ೭॥ ದಲ್ಲಿದ್ದರೆ ೩೦ನೇ ವರ್ಷಕ್ಕೆ ೨ನೇ ೭॥, ೬೦ಕ್ಕೆ ೩ನೇ ೭॥ ಬರುತ್ತದೆ. ನಮ್ಮ ಜನರಲ್ಲಿ ಒಂದು ಕಲ್ಪನೆ ಇರುವದು. ೧ನೇ ೭॥ ಕಾಡುವದು. ೨ನೇದರಲ್ಲಿ ಲಾಭವಾಗುವದು. ೩ನೇದು ಬಂದಾಗ 'ಅಷ್ಟರೊಳು ಪುರಂದರವಿಠಲನನ್ನು ಮನವೇ,' ಎಂದು ಸಾರಿ ಹೇಳುವದು ಜನ್ಮಕುಂಡಲಿಯಲ್ಲಿ ದೀರ್ಘಾ-ಯುಷ್ಯದ ಯೋಗವೇ ಇದ್ದರೆ, ೩ನೇ ೭॥ ದಲ್ಲಿಯೂ ಬದುಕುವರು. ಗುಜರಾತದಲ್ಲಿ ೪ನೇ ೮ನೇ ಶನಿಗೆ ಢೋಟಾ ೭॥ ಎನ್ನುವರು. ನಮ್ಮಲ್ಲಿ ಪಂಚಮ ಶನಿ ಎನ್ನುತ್ತಾರೆ. ಇದಲ್ಲದೆ ಕೆಲವರು ರವಿಯ ೭॥, ಚಂದ್ರನ ೭॥, ಲಗ್ನದ ೭॥ ಹಿಡಿಯುವರು. ಹೀಗಾಗಿ ಆಯುಷ್ಯದ ೭/೮ ಭಾಗವು ಶನಿಯ ಪೀಡೆಯಲ್ಲಿಯೇ ಕಳೆದರೆ ತತಃ ಕಿಂ ಎನ್ನುವ ಪ್ರಸಂಗ ಬರುವದು.

ಆದರೆ ಇದು ಅತಿಶಯೋಕ್ತ್ಯಲಂಕಾರದ ನುಡಿಯು. ವಾಪೀಕಾಪಿ ಸ್ಫುರತಿ ಗಗನೇತತ್ಪರಂ, ಸೂಕ್ಷ್ಮಪದ್ಯ ಎಂದು ಕವಿಯು ನುಡಿದಂತೆ ಶನಿಯ ಮಹಿಮೆಯನ್ನು ವಿವರಿಸಿ ಹೇಳುವದಕ್ಕಾಗಿ.

ಇದರಿಂದ ಶನಿಯ ಖಲತೆ ಕಡಿಮೆ ಎಂದು ನಾವು ಹೇಳುವದಿಲ್ಲ. ಯಾಕೆಂದರೆ ಅವನು ಎಂತಹ ಧುರೀಣರಲ್ಲಿಯೂ ಕೂಡ ನಿರಾಶಾ ಭಾವನೆಯನ್ನು ಹುಟ್ಟಿಸುವನು. "ಸಂಸಾರೆನ್ನಭುವಿ ಕಿಂ ಸಾರಮಾಪ್ಯಶಕ್ಯ ಶಂಸಾಧುನಾ ಶುಭ ಮತೇ" ಎಂಬ ಉದ್ಗಾರ ತೆಗೆಯಹಚ್ಚುವವನು.

ಶನಿಯೇ. ಹಿಟ್ಲರ, ನೆಪೋಲಿಯನ್ ಬೋನಾಪಾರ್ಟರಂತಹ ಮಹಾ ಪರಾಕ್ರಮಿಗಳ ಕುಂಡಲಿಗಳಲ್ಲಿ ಕೂಡ ಅವನು ಕರ್ಮಸ್ಥಾನದಲ್ಲಿದ್ದು, ಅವರನ್ನು ಕೂಡ ಮೇಲಕ್ಕೇರಿಸಿ ಕೆಳಗಿಳಿಸಿದನು. ಇದು ಶನಿಯ ಗುಣಧರ್ಮ. ಆದರೆ ಅವನು ಕರ್ಮದಲ್ಲಿ (೧೦ನೇ ಸ್ಥಾನ), ಅನುಕೂಲ ರಾಶಿಯಲ್ಲಿ ಶುಭದೃಷ್ಟನಾಗಿರುವಲ್ಲಿ ಅಧಃಪಾತದ ಅಂಜಿಕೆಯಿಲ್ಲ. ಸಾರಾವಲಿಕಾರನು ಹೇಳುತ್ತಾನೆ ' ದಶಮಸ್ಥೇ ರವಿತನಯೇ ವೃಂದಪುರ ಗ್ರಾಮನೇತಾವಾ' ಈ ತಾರತಮ್ಯವನ್ನು ಸೂಕ್ಷ್ಮದೃಷ್ಟಿಯಿಂದ ಅರಿಯದಿದ್ದರೆ ಜ್ಯೋತಿಷಿಗಳು ಜಾರಿಬೀಳುವರು.

ಜ್ಯೋತಿಷ್ಯದ ಪುಸ್ತಕವನ್ನು ಓದುವಾಗ (ಜೋಗಳೇಕರರ ಪುಸ್ತಕವನ್ನೇ ಆಗಲಿ ಇನ್ನಾರ ಪುಸ್ತಕವನ್ನೇ ಆಗಲಿ) ಅಕ್ಷರಶಃ ಅರ್ಥವನ್ನು ಗ್ರಹಿಸ ಬಾರದು. ಇಡೀ ಕುಂಡಲಿಯನ್ನು ಅಭ್ಯಾಸ ಮಾಡಿ, ಸಾರಾಂಶವನ್ನು ಗ್ರಹಿಸ ಬೇಕಾಗುವದು. ಗ್ರಂಥಗಳು ನಿರ್ದಿಷ್ಟ ಫಲವನ್ನು ಹೇಳುವದಿಲ್ಲ. ಅವು ಮಾರ್ಗದರ್ಶನದ ಮಾಡುವವು. ಒಂದಕ್ಕೊಂದು ಸಂಬಂಧವಿರುವ ಗ್ರಹದ ಸಾರಫಲವನ್ನು ನೀವು ಊಹಿಸಿ ತಿಳಿದುಕೊಳ್ಳಬೇಕಾಗುವದು. ಇನ್ನೂ ಒಂದು ಮಾತು ನೀವೂ ಕೂಡ ಗೋಚರ ಫಲಗಳಿಗೆ ಅದು ಸಹಾಯಕ ವಾಗಿರುವದು. ಅದು ಮಿನಿಟಿನ ಮುಳ್ಳು ಇದ್ದಂತೆ. ತಾಸಿನ ಮುಳ್ಳು ದಶಾಂತರ್ದಶಾ ಪದ್ಧತಿ.

ಉದಾ: - ನಿಮಗೆ ಮಾರಕ ದಶಾ ಅಂತರ್ದಶೆಗಳು ಬಂದಾಗ ಜೈಮಿನಿ ಪದ್ಧತಿಯಂತೆ ನಿಮ್ಮ ಅಲ್ಪಾಯು, ಮಧ್ಯಾಯು, ದೀರ್ಘಾಯು ಜಾತಕಗಳನ್ನು ನಿರ್ಣಯಿಸಿದ ಬಳಿಕ ನಿಮಗೆ ೭೮ ಇದ್ದರೆ, ೮ನೇ ಶನಿ ಇದ್ದರೆ ನಿಮಗೆ ಯಮನ ಕೋಣನ ಘಂಟೆಯ ಸಪ್ಪಳವು ಕೇಳಬರಹತ್ತಿದೆ ಎಂದು ಹೇಳಬಹುದು.

ಅಲನ್ ಲೀಯೋ: ಇವರು ಶನಿಯ ಓಡೆಯನ್ನು ಹೇಳುವಾಗ ಚಲಿತ ಚಂದ್ರನು ತಿಂಗಳಿಗೆ ೧ ಅಂಶ ಸರಿಯುತ್ತಾನೆ. ಗೋಚರಿಯ ಶನಿಯ ಗತಿಯೂ ತಿಂಗಳಿಗೆ ೧ ಅಂಶ ಇರುವದು. ಕರ್ಮಧರ್ಮ ಸಂಯೊಗದಿಂದ ಗೋಚರ ಸಂಚಾರದಲ್ಲಿ ಚಂದ್ರನ ಬೆನ್ನ ಹಿಂದೆ ಶನಿಯು ಅವನ ಬೆನ್ನಟ್ಟು

ವನು. ಯಾರೊಬ್ಬರಿಗೂ ತೀವ್ರಗತಿಯುಂಟಾಗದಿದ್ದರೆ ಇದು ಬಹಳ ವರ್ಷಗಳವರೆಗೆ ನಡೆಯುವದು. ಇದು ಓದಿದ ಅಷ್ಟು. ಚಂದ್ರನು ಮನಃ ಕಾರಕ- ಮಾನಸಿಕ ಅಶಾಂತಿ ಹುಟ್ಟುವದು. ಚಂದ್ರನು ಯಾವ ಭಾವದ ಅಧಿಪತಿ ಇರುವನೋ ಆ ಭಾವಕ್ಕೆ ಪೀಡ. ಗ್ರಂಥಗಳಲ್ಲಿರುವ ಫಲಗಳನ್ನು ಸೌಮ್ಯವಾದಿ ಗ್ರಹಿಸಿದಲ್ಲಿ ಜ್ಯೋತಿಷ್ಯದಲ್ಲಿ ನಿಮಗೆ ಸತ್ಯವು ತೋರಹತ್ತುವದು.

ಜ್ಯೋತಿಷ್ಯದಲ್ಲಿ ಸತ್ಯವಿದೆ. ಶಾಸ್ತ್ರವು ಸಾಗರದಂತೆ ವಿಶಾಲವಾಗಿ ಇರುವದು. ಸತ್ಯವು ಸಮುದ್ರದ ಮೇಲೆ ತೇಲಿಬರುವ ನೊರೆಯಂತೆ ಇದ್ದು ಅದು ನಿಮ್ಮ ಕೈಗೆ ಸುಲಭವಾಗಿ ಸಿಲುಕುವದಿಲ್ಲ. ಸಮುದ್ರದ ತಳದಲ್ಲಿ ಆಳವಾಗಿ ಮುಳುಗಿ ಮುತ್ತಿನ ಸಿಂಪುಗಳನ್ನು ಶೋಧಿಸಿದಷ್ಟು ಕಷ್ಟ ಸಾಧ್ಯವಾಗಿರುವದು. ಇದನ್ನು ಇಂದಿನ ಪ್ರಚ್ಛಕರೂ ಜ್ಯೋತಿಷ್ಯಾಭ್ಯಾಸಿಗಳೂ ಪೂರ್ಣವಾಗಿ ಅರಿತುಕೊಳ್ಳಬೇಕು. ದರ್ಶನಗಳ ಅಭ್ಯಾಸಿಗಳಿಗೆ ಈ ಕಷ್ಟದ ದಾರಿ ವಿದಿತವಾಗಿರುವದು. ಇದು ತಿಬೇಟದ ಗುಡ್ಡಗಳ ಕಣಿವೆ ದಾರಿ. ಅಲ್ಲಿ ಸುಲಭ ಸಂಚಾರವಿಲ್ಲ. ಜ್ಯೋತಿಷ್ಯಕ್ಕೂ ಈ ಮಾತು ಅನ್ವಯಿಸು ವದು, ಅಲ್ಲಿಯೂ ಪ್ರತ್ಯಕ್ಷ ಅನುಮಾನ ಆಗಮ(ಪರಾಶರ ಜೈಮಿನ್ಯಾದಿಗಳ) ಆಪ್ತವಾಕ್ಯಗಳು ಈ ಪ್ರಮಾಣಗಳಿಂದ ಪರೀಕ್ಷಿಸಿ ನೋಡಬೇಕಾಗುವದು. ಈ ಶಾಸ್ತ್ರವು ಪ್ರತ್ಯಕ್ಷವೆಂದು ಹೇಳಲ್ಪಟ್ಟಿದೆ. ಸೂರ್ಯ ಚಂದ್ರರು ಪ್ರತ್ಯಕ್ಷ ಕಾಣುತ್ತಾರೆ. ಗುರು ಮಂಗಳ ಶನಿಗಳೂ ಕಾಣುತ್ತಾರೆ. ಇದರ ಇವರಿಂದ ಉಂಟಾಗುವ ಪರಿಣಾಮಗಳನ್ನು ಅನುಭವ, ಆಗಮ, ಅನುಮಾನಗಳಿಂದ ತಿಳಿಯಬೇಕಾಗುವದು.

ಗ್ರಹಗಳು ಪರಮಾತ್ಮನ ದೂತರು, ಅವನ ನಿಯಂತ್ರಣಕ್ಕೆ ಒಳ ಗಾದವರು, ಮಾನವನ ಕರ್ಮಾನುಸಾರವಾಗಿ ಅವನಿಗೆ ಶುಭಾಶುಭ ಫಲಗಳನ್ನು ಕೊಡತಕ್ಕವರು. ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದವರು. ಅಶುಭ ಫಲಗಳನ್ನು ತಪ್ಪಿಸಿಕೊಳ್ಳಬಹುದು. ಇಂಥವರಿಗೆ. ಸಕಲ ಗ್ರಹ ಬಲ ನೀನೇ ಸರಸಿಜಾಕ್ಷ, ಎಂದು ಪುರಂದರದಾಸರು ಹೇಳಿರುವರು. ಸರ್ವಸಂಗ ಪರಿತ್ಯಾಗಿಗಳಿಗೆ ಗ್ರಹಗಳ ಅಂಜಿಕೆ ಏತರದು ? ಹಾಗಾದರೆ ವರಾಹಮಿಹಿರ ಆಚಾರ್ಯರು ಸನ್ಯಾಸಿನೋಪಿ ಪರಿಪೃಚ್ಛಂತಿ ಎಂದು ಏಕೆ

ಹೇಳಿದರು ಎಂಬ ಸಂದೇಹ ಬರಬಹುದು. 'ಕೌಪೀನವಂತಃ ಖಲು ಭಾಗ್ಯವಂತಃ' ಎಂಬ ಆತ್ಮಜ್ಞಾನವುಂಟಾದವರಿಗೆ ಶನಿಯ ಭಯವಿಲ್ಲ, ನಿಜ. ಆದರೆ ಆ ಪದವನ್ನು ಮುಟ್ಟಿದವರು ವಿರಲರು.

ನಮ್ಮ ಊರಿಗೆ ಸನ್ಯಾಸಿ ಬಂದಿದ್ದರು. ಅವರು ಪರೋಪಕಾರಿಗಳು. ಅವರಿಗೆ ಸಂಸಾರದ ಬಂಧನವೂ ಇಲ್ಲಿಲ್ಲ. ಒಮ್ಮೆ ಪಾಠಶಾಲೆಯಲ್ಲಿ ಶನಿಯ ಪೀಡೆಯ ಚರ್ಚೆ ನಡೆದಾಗ ಅವರೂ ಇದ್ದರು. ಪಾಠಶಾಲೆಯ ಅಧ್ಯಾಪಕರಾದ ನಮ್ಮ ಕಕ್ಕಂದಿರಾದ ( ಈಗ ದಿವಂಗತರಾಗಿರುವ ಶ್ರೀ ವೆಂಕಣಭಟ್ಟರಿಗೆ) ಅವರು ನುಡಿದದ್ದೇನೆಂದರೆ—ಭಟ್ಟರೆ, ನಿಮ್ಮ ಶನಿಯು ನಮ್ಮನ್ನೇನು ಮಾಡುವನು? ಎಂದು ಕೇಳಿದರು. ಕೂಡಲೇ ಪ್ರತ್ಯುತ್ತರನ್ನ ಮಾತಿಗಳಾದ ಶ್ರೀ ವೆಂಕಣ್ಣಭಟ್ಟರು ಉತ್ತರ ಕೊಟ್ಟರು: "ಇನ್ನೇನು ಮಾಡ ಬೇಕು. ಗೃಹತ್ಯಾಗ, ದೇಶತ್ಯಾಗ ಮಾಡಿಸಿ ಮುಂಡನ ಮಾಡಿಸಿ ಸಂಚಾರ ಕ್ಕಾಗಿ ನಿಮ್ಮನ್ನು ಅಟ್ಟಿದವನು ಶನಿಯಲ್ಲವೆ? ಶನಿಯ ದ್ರೇಷ್ಕಾಣದಲ್ಲಿ ಚಂದ್ರನಿದ್ದರೆ, ಒಂದೇ ಭಾವದಲ್ಲಿ ೫ ಗ್ರಹಗಳಿದ್ದರೆ ಸಂನ್ಯಾಸಿಯೋಗ ವೆಂದು ಶಾಸ್ತ್ರವು ಹೇಳುವದು. ಅಂತೂ ತ್ಯಾಗ ವೃತ್ತಿಯನ್ನು ಕಲಿಸುವವ ಶನಿ.

ಇನ್ನು ವೇದಾಂತದ ದೃಷ್ಟಿಯಿಂದ ವಿಚಾರಿಸಿದರೆ ಶನಿಯು ಸದ್ ಗ್ರಹವೆಂದು ತಿಳಿಯಲು ಅಡ್ಡಿಯಿಲ್ಲ. ಯಾಕೆಂದರೆ ಮಾನವನ ಸುಪ್ತ ಆತ್ಮಶಕ್ತಿಯನ್ನು ಜಾಗ್ರತಮಾಡುವ ಕಾರ್ಯವು ಅವನ ಕಡೆಗಿರುವದು. ಬಂಧುಗಳು ಕೈಬಿಟ್ಟಾಗ, ಹೆಂಡತಿ ಮಕ್ಕಳು ಕೂಡ ತಿರಸ್ಕರಿಸುವಾಗ, ಮಿತ್ರರು ದ್ರೋಹಬಗೆಯುವಾಗ, ಜಗತ್ತಿನಲ್ಲಿ ಯಾವ ಕಡೆಗೂ ಬೆಳಕಿನ ಕಿರಣಗಳು ತೋರದಿದ್ದಾಗ ನಿರಾಶಾಮಯ ಸ್ಥಿತಿಯಲ್ಲಿ ಮನುಷ್ಯನ ಮನಸ್ಸು ಅಂತರ್ಮುಖವಾಗುವದು, ಆಗ ಪರಮಾತ್ಮನಿಗೆ ಶರಣಾಗತ ವಾಗುವದು. ಆದ್ದರಿಂದಲೇ ಕುಂತಿ ಮಹಾಭಾರತದಲ್ಲಿ ಕೃಷ್ಣನಿಗೆ ಬೇಡಿ ಕೊಂಡಿರುವಳು. 'ವಿಪದಃ ಸಂತು ನಃ ಶಶ್ವತ್ ಯಾಸು ಸಂಕೀರ್ತ್ಯತೇಹರಿಃ' ಎಂದು. ಐಶ್ವರ್ಯ ಸುಖಸಮೃದ್ಧಿಗಳು ಇರುವಾಗ ಯಾರೂ ದೇವರನ್ನು ನೆನಿಸುವದಿಲ್ಲ, ಧನಮದ ಜನಮದ ವಿದ್ಯಾಮದ ಎಲ್ಲ ಮದಗಳನ್ನು

ಕಳೆಯಲು ಶನಿ ಬರುತ್ತಾನೆ. ಆದುವೇ ಆತ್ಮಜಾಗೃತಿಯ ಕಾಲವೆಂದು ತಿಳಿಯಬೇಕು.

ಕಾರಣ, ಶನಿಯ ಪೀಡೆಯ ಮಹಿಮೆಯನ್ನು ಬಣ್ಣಿಸುವ ಪುಸ್ತಕವನ್ನು ಬರೆದ ಶ್ರೀ ಜೋಗಳೇಕರರನ್ನು ನಾನು ಅಭಿನಂದಿಸುವೆನು. ಈ ಪುಸ್ತಕದಲ್ಲಿ ಶನಿಯ ಬಗ್ಗೆ ಸಾಕಷ್ಟು ವಿವರಣೆ ಇರುವದು.

ಶನಿ ಅಶುಭಗ್ರಹ, ಗುರು ಶುಭಗ್ರಹ ಇವರಿಬ್ಬರ ಯುತಿ ೨೦ ವರ್ಷಕ್ಕೆ ಒಮ್ಮೆ ಆಗುತ್ತದೆ. ಈ ಯುತಿಯು ಯಾವ ರಾಶಿಯಲ್ಲಿ ಆಗುತ್ತದೋ ಆ ರಾಶಿಯ ಅಧಿಕಾರವಿದ್ದ ರಾಶಿಯಲ್ಲಿ ಮಹಾಪರಿವರ್ತನ ಸೂಚಕವಾಗಿದೆ. ೧೯೬೨ ಫೆಬ್ರುವರಿಯಲ್ಲಿ ಅಷ್ಟಗ್ರಹಗಳ ಯೋಗ. ನಿರಯನ ಮಕರರಾಶಿಯಲ್ಲಿ, ಸಾಯನ ಕುಂಭರಾಶಿಯಲ್ಲಿ ಉಂಟಾಗುವದು. ಇದು ಮಹಾಪರಿವರ್ತನ ಸೂಚಕ. ಕುಂಭರಾಶಿಯ ಅಧಿಕಾರ ರಶಿಯದ ಮೇಲೆ ಇರುವದು. ಮಕರ ರಾಶಿಯ ಅಧಿಕಾರ ಭಾರತದ ಮೇಲೆ ಇರುವದೆಂದು ಕೆಲವರು; ಭಾರತದ್ದು ಕನ್ಯಾರಾಶಿಯೆಂದು ಕೆಲವರು. ಅಂತೂ ಈ ಅಣುಯುಗದಲ್ಲಿ ಅಷ್ಟಗ್ರಹ ಯೋಗವು ೭॥ದ ಪ್ರಭಾವವನ್ನು ತೋರಿಸಬಹುದು.

"ತದೇಜತಿ–ತನ್ನೈಜತಿ ತದ್ದೂರೇ ತದಂತಿಕೇ
ಕಮೇತದ್ಯಕ್ಷಮಿತಿ"

ಈ ಗೂಢ ಶಕ್ತಿಯನ್ನು ತಿಳಿಯುವ ದಾರಿ ಜ್ಯೋತಿಷ್ಯ ಶಾಸ್ತ್ರದಲ್ಲಿಲ್ಲ, ಯೋಗಶಾಸ್ತ್ರದಲ್ಲಿರುವದು.

ಧಾರವಾಡ ಪಂ. ಕೇಶವ ಶರ್ಮಾ ಗಲಗಲಿ

ತಾ. ೧೦-೪-೧೯೫೫

# ಲೇಖಕರ ಅರಿಕೆ

ಸಿರಿಗನ್ನಡದ ವಾಚಕರಿಗೆ 'ಫಲಜ್ಯೋತಿಷ್ಯ ಜ್ಯೋತಿರ್ಮಾಲೆ' ಯ ಮೂರನೆಯ ನಕ್ಷತ್ರವಾದ ' ಸಾಡೇಸಾತಿ ' ಎಂಬ ಗ್ರಂಥವನ್ನು ಒದಗಿಸಲು ಅತ್ಯಂತ ಆನಂದವಾಗುತ್ತದೆ. ಮೊದಲು ಕೇವಲ ೬೦ ಪುಟಗಳ ಚಿಕ್ಕ ಗ್ರಂಥವನ್ನು ಬರೆಯಬೇಕೆಂದು ಪ್ರಾರಂಭಿಸಿದೆ. ಆದರೆ ಅದರಲ್ಲಿ ಕೆಲವು ಉಪಯುಕ್ತ ವಿಷಯಗಳನ್ನು ಸೇರಿಸುವದು ಅನಿವಾರ್ಯವಾದುದರಿಂದ ನೂರು ಪುಟಗಳವರೆಗೆ ಬೆಳೆಯಿತು. ಇದರ ಶೀರ್ಷಿಕೆಯ ಮಹಿಮೆಯು ಈ ಪುಸ್ತಕಕ್ಕೂ ತಗಲಧೆಯ ಉಳಿದಿಲ್ಲ. ಮೊದಲಿನ ನನ್ನ ಕೃತಿಗಳಾದ 'ವಧೂವರರ ಜ್ಯೋತಿಷ್ಯ' ಹಾಗೂ 'ಸ್ತ್ರೀ ಜ್ಯೋತಿಷ್ಯ' ಗಳಿಗಿಂತ ಹೆಚ್ಚು ತೊಂದರೆಯನ್ನು ಎದುರಿಸಿ ಪ್ರಕಟಿಸುವೆ. ಪುಸ್ತಕದ ಕೊನೆಗೆ ಒಂದು ಪರಿಶಿಷ್ಟವನ್ನು ಸೇರಿಸಿ ಅದರಲ್ಲಿ ೧೯೩೦ರಿಂದ ೧೯೭೫ರ ವರೆಗೆ ಶನಿಯ ಭ್ರಮಣವು ಯಾವ ಯಾವ ರಾಶಿಯಲ್ಲಿ ಯಾವ ತಿಂಗಳಲ್ಲಿ ಎಷ್ಟು ಎಷ್ಟು ಅಂಶವಿರುತ್ತದೆ ಎಂಬುದನ್ನು ಕೊಟ್ಟಿದ್ದೇನೆ.

ಈ ಪುಸ್ತಕಕ್ಕೆ ಪ್ರೌಢವಾದ ಮುನ್ನುಡಿಯನ್ನು ವಯೋವೃದ್ಧರೂ ಜ್ಞಾನ ವೃದ್ಧರೂ ಆಂಗ್ಲ ಹಾಗೂ ಸಂಸ್ಕೃತ-ಜ್ಯೋತಿಷ್ಯ ಗ್ರಂಥ ಪಾರಂಗತರೂ ಗ್ರಂಥಕರ್ತರೂ ಆದ ಶ್ರೀ ಪಂಡಿತ ಕೇಶವಶರ್ಮಾ ಗಲಗಲಿಯವರು ಬರೆದುಕೊಟ್ಟು ಆಶೀರ್ವದಿಸಿರುವರಲ್ಲದೆ ಪುಸ್ತಕಕ್ಕೆ ಹೆಚ್ಚಿನ ತೂಕವನ್ನು ತಂದುಕೊಟ್ಟಿದ್ದಾರೆ. ಇದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಮಧ್ಯದಲ್ಲಿ ಆರ್ಥಿಕ ತೊಂದರೆಯಿಂದ ಪ್ರಕಟನೆಯು ವಿಲಂಬಗೊಳ್ಳುತ್ತಿರುವಾಗ ನೆರವಾದ ನನ್ನ ಮಿತ್ರರಾದ ಶ್ರೀ ಎನ್. ಕೆ. ಪಾಟೀಲರಿಗೆ ನಾನು ಅತ್ಯಂತ ಋಣಿ.

ಪುಸ್ತಕದ ಆವರಣಕ್ಕೆ ಯೋಗ್ಯ ಚಿತ್ರವನ್ನು ಮತ್ತೆ ಒದಗಿಸಿದ ನನ್ನ ತರುಣ ಮಿತ್ರರಾದ ' ಪ್ರಮೀಲಾ ಆರ್ಟ್ಸ ' ದವರಿಗೂ ನಾನು ಕೃತಜ್ಞ. ಪ್ರತಿ ಸಲದಂತೆ ಯೋಗ್ಯ ಸಮಯದಲ್ಲಿ ಮುದ್ರಿಸಿ ಉಪಕರಿಸಿದ ಶ್ರೀ. ನಾ. ಅ. ಹೊಸಕೇರಿಯವರಿಗೆ ನಾನು ಅತ್ಯಂತ ಕೃತಜ್ಞ.

ನನ್ನ ಲೇಖನ ವ್ಯವಸಾಯಕ್ಕೆ ಹೆಚ್ಚಿನ ಸ್ಫೂರ್ತಿಯನ್ನೂ ಉತ್ಸಾಹವನ್ನೂ ತುಂಬಿದ ನನ್ನ ಬಾಲ್ಯ ಮಿತ್ರ ಶ್ರೀ. ಜಿ. ವ್ಹಿ. ಕುಲಕರ್ಣಿ, ಎಂ. ಎ. ಅವರಿಗೂ ಮತ್ತು ನನ್ನ ಅಣ್ಣಂದಿರಾದ ಶ್ರೀ ಎಮ್. ಕೆ. ಜೋಗಳೇಕರರಿಗೂ ಶ್ಲಾಘಿಸಿದರೆ ನನ್ನ ಬೆನ್ನನ್ನು ನಾನೇ ಚಪ್ಪರಿಸಿಕೊಂಡಂತೆ.

ಸಹೃದಯರಾದ ವಾಚಕರು ಮತ್ತೆ ಪ್ರೋತ್ಸಾಹವನ್ನೀಯುವರೆಂದು ನಂಬಿದ,

ಧಾರವಾಡ
ಹನುಮ ಜಯಂತಿ
೨೩-೪--೧೯೫೯

ತಮ್ಮವನಾದ,
ಎನ್. ಕೆ. ಜೋಗಳೇಕರ

## ಚತುರ್ಥ ಆವೃತ್ತಿಯನ್ನು ಕುರಿತು

ಸಾಡೇಸಾತಿ ಗ್ರಂಥದ ತೃತೀಯ ಮುದ್ರಣದ ಪ್ರತಿಗಳು ಮುಗಿದು ಅನೇಕ ವರ್ಷಗಳಾದವು. ಅನೇಕ ಜ್ಯೋತಿಷಿಗಳ ಅಭಿಮಾನ ಬಿನ್ನಹದ ಮೂಲಕವೂ ಧಾರವಾಡ ಚಂದ್ರೋದಯ ಮುದ್ರಣಾಲಯದ ಒಡೆಯರ ಸಹಕಾರದ ಮೂಲಕವೂ ಚತುರ್ಥ ಆವೃತ್ತಿಯನ್ನು ಕುರಿತು ಮುದ್ರಣ ಕೆ, ವಾಯಿತೆಂದು ತಿಳಿಸಲು ಸಂತೋಷವೆನಿಸುತ್ತದೆ.

೨೯-೧೧-೧೯೮೭

ತಮ್ಮ ವಿಶ್ವಾಸಿ,
ಎನ್. ಕೆ. ಜೋಗಳೇಕರ

-೦-

# ಪರಿವಿಡಿ


| | | ಪುಟ |
|---|---|---|
| ೧. | ಸಾಡೇಸಾತಿಯ ಪರಿಣಾಮ | 1 |
| ೨. | ಕುಂಡಲೀ ನಿರೀಕ್ಷಣೆ | 4 |
| ೩. | ಜ್ಯೋತಿಷ್ಯದ ಮೂಲಭೂತ ಸಿದ್ಧಾಂತಗಳು, ಗ್ರಹಗಳ ಅವಸ್ಥೆ, ಅಧಿಕಾರ ವ್ಯಾಪ್ತಿ, ಯೋಗ, ಕಾರಕ-ಮಾರಕ ಗ್ರಹಗಳು ... ... | 8 |
| ೪. | ಸಾಡೇಸಾತಿಯನ್ನು ಹೇಗೆ ನೋಡಬೇಕು ? (ಅನುಕೂಲ ಹಾಗೂ ಪ್ರತಿಕೂಲ ಸಾಡೇಸಾತಿ) ... ... | 26 |
| ೫. | ರಾಶಿಗಳ ಮೇಲಿಂದ ಶನಿಯ ಪರಿಭ್ರಮಣ ... ... | 33 |
| ೬. | ಸ್ಥಾನಗಳ ಮೇಲಿಂದ ಶನಿಯ ಪರಿಭ್ರಮಣ ... ... | 41 |
| ೭. | ಟೀಯಲ್ಲಿ ಶನಿಯ ವಿಚಾರ ಅಷ್ಟಕವರ್ಗ ಪದ್ಧತಿಯಿಂದ | 47 |
| ೮. | ಗ್ರಹಗಳ ಮೇಲಿಂದ ಶನಿಯ ಪರಿಭ್ರಮಣ | 55 |
| ೯. | ಭಾವೇಶನ ಮೇಲಿಂದ ಶನಿಯ ಪರಿಭ್ರಮಣ ದಶಾ ಪದ್ಧತಿಯಿಂದ ಸಾಡೇಸಾತಿಯ ವಿಚಾರ, ಗರ್ಭಗತಸಾಡೇಸಾತಿ, ಜನ್ಮಾರಭ್ಯ ಸಾಡೇಸಾತಿ ... ... | 62 |
| ೧೦. | ಸಾಡೇಸಾತಿಯ ಸಮಯದಲ್ಲಿ ಆಗುವ ಕೆಲವು ಅನುಭವಸಿದ್ಧ ನಿಯಮಗಳು ... ... | 85 |
| ೧೧. | ಸಾಡೇಸಾತಿಯ ಮಾದರಿ ಕುಂಡಲಿಗಳು .... ... | 88 |
| | ಸಾಡೇಸಾತಿ ಶನಿಯ ಅನಿಷ್ಟ ಫಲ ಪರಿಹಾರ ... ... | 95 |

ಶ್ರೀ

# ೧. ಸಾಡೇಸಾತಿಯ ಪರಿಣಾಮ

ಫಲಜ್ಯೋತಿಷ್ಯದಲ್ಲಿ ಸಾಡೇಸಾತಿಗೆ ಇರುವ ಪ್ರಾಮುಖ್ಯತೆಯು ಉಳಿದ ಯಾವ ಯೋಗಕ್ಕೂ ಇಲ್ಲ. 'ಸಾಡೇಸಾತಿ' ಈ ಶಬ್ದದ ಹಿಂದೆ ಅಡಕವಾಗಿರುವ ಭೀಕರ ಕಲ್ಪನೆ ಅನೇಕರಿಗೆ ಕೇಳಿ, ತಿಳಿದು, ಅನುಭವಿಸಿ ಬಂದದ್ದುಂಟು. ವಿಕ್ರಮರಾಜನ ಕರುಣ ಕಥೆಯನ್ನು ಓದಿ, ಕೇಳಿ, ವ್ಯಥೆಪಡುವ ಎಷ್ಟು ಜನರಿಲ್ಲ! 'ಸಾಡೇಸಾತಿ' ಎಂದಾಕ್ಷಣವೇ ಹೌಹಾರುವ ಜನರೂ ಇದ್ದಾರೆ. ಸಾಡೇಸಾತಿಯಲ್ಲಿ ಯಾವದಾದರೊಂದು ಕಾರಣದ ಮೂಲಕ ಕನಕ ಕಾಂಚಾಣಗಳನ್ನು ಕಳೆದುಕೊಂಡು, ಬಳಲಿ ಬೆಂಡಾಗಿ, ದಾರಿದ್ರ್ಯದ ಕಟು ಅನುಭವವನ್ನು ಅನುಭೋಗಿಸಿದ ಎಷ್ಟು ಜನರಿಲ್ಲ! 'ಸಾಡೇಸಾತಿ'ಯಲ್ಲಿ ಯಾವದೊಂದು ಕ್ಷುದ್ರ ನೆವದಿಂದ ಅಪಾಂಗರಾದ ಜನರ ಸಂಖ್ಯೆಯೇನು ಕಡಿಮೆ ಉಂಟೇ!

ಜೀವನದ ಜೀಕಃಯ್ಯಾಲೆಯಲ್ಲಿ ಸುಖದ ಸೋಪಾನ ಹತ್ತಿ, ಕಷ್ಟ ಕಾರ್ಪಣ್ಯದ ಸುಳಿವೂ ಅರಿಯದ ಜೀವನಕ್ಕೆ 'ಸಾಡೆಸಾತಿ'ಯೇ ಕಾಲಿಟ್ಟೊಡನೆಯೇ ದುಃಖದ ಪರಂಪರೆಯೇ ಬೆನ್ನಟ್ಟಿ ಬಂದಿತೋ ಎನ್ನುವಂತ ಅಧಃಪತನಕ್ಕೆ ಇಳಿದ ಅದೆಷ್ಟು ಜನರಿಲ್ಲ! ಮಾನ್ಯ, ಪ್ರತಿಷ್ಠಿತ, ಶ್ರೀಮಂತ, ಪ್ರಾಮಾಣಿಕ, ಜಾಣ ಎಂದು ಒಂದಾನೊಂದು ಕಾಲಕ್ಕೆ ಜಗತ್ತು ಥಳಾಥುಂಗುರವಾಗಿ ಸಾರುತ್ತಿದ್ದ, ಅದೇ ವ್ಯಕ್ತಿಯು ಸಾಡೇಸಾತಿಯಲ್ಲಿ ಜನರ ಅಣಕಿಗೆ ತಿರಸ್ಕಾರಕ್ಕೆ ಬಲಿಯಾಗಿ, ಅವರ ಸಹಾನುಭೂತಿ, ಪ್ರೀತಿಗಳಿಗೆ ಎರವಾಗಿದ್ದಾನೆ. ಅದೋ ನೋಡಿ. ಅವನ ಮುಖ ಕಳೆಗುಂದಿದೆ! ಗೆಲುವಿನ ಹೊನಲು ಬತ್ತಿದೆ!! ದೇಹವು ಕ್ಷೀಣವಾಗತೊಡಗಿದೆ ನಿದ್ರೆ ಇಲ್ಲದೆ ಅನೇಕ ರಾತ್ರಿಗಳು ನುಸುಳಿ ಹೋಗುತ್ತಿವೆ. ಜೀವನದಲ್ಲಿ ಕಾರ್ಮೋಡ ಮುಸುಕಿದೆ ಕೊಟನ ದಾರಿಗೆ ಎಳೆಯಲ್ಪಟ್ಟ ಮನುಷ್ಯನಂತೆ ಯಾವ ದಾರಿ

ಹಿಡಿದು ಹೋಗಬೇಕೆಂಬ ವಿಚಾರ ಆತಗೆ ತಿಳಿಯದಾಗಿದೆ. ಸಂಸಾರದಲ್ಲಿ ರಸನಿಮಿಷಗಳನ್ನು ಅನಂತವಾಗಿ ಅನುಭವಿಸಿ ಮನೆಯೆಂದರೆ ಸ್ವರ್ಗಸಮಾನ ವೆಂದು ತಿಳಿದಿದ್ದವನ ಅದೇ ಮನೆಯು ಇಂದು ಹರಿದು ತಿಂದಂತಿದೆ. ಭೂಕಂಪವಾಗಿರುವ ಪ್ರದೇಶದಂತೆ ಎಲ್ಲವೂ ಅಸ್ತವ್ಯಸ್ತವಾಗಿದೆ. ಹಸಿವು ನೀರಡಿಕೆಗಳ ಪರವೆ ಇಲ್ಲದೆ ಜೀವನವನ್ನು ಹೇಗೋ ದೂಡುತ್ತಿದ್ದಾನೆ. ಸಾಡೇಸಾತಿಯಲ್ಲಿ ಕಾರಾಗೃಹ ಕಂಡವರೆಷ್ಟು ಜನ! ಆರೋಗ್ಯ ಕಳೆದುಕೊಂಡ ವರೆಷ್ಟು ಜನ! ಮನೆಯ ಸುಖಕ್ಕೆ ಎರವಾದವರೆಷ್ಟು! ಶಿಕ್ಷಣದಲ್ಲಿ ಹಾನಿ ಗೊಂಡವರೆಷ್ಟು!! ಉದ್ಯೋಗದಲ್ಲಿ ಹಾನಿಗೊಂಡವರೆಷ್ಟು! ಹೀಗೆ ನಾನಾ ಪ್ರಕಾರವಾಗಿ ಜೀವನದ ಎಲ್ಲ ಅಂಗಾಂಗಗಳೂ ಶಿಥಿಲವಾಗಿ ದುಃಖದ ಹೊರೆಯನ್ನು ಹೊತ್ತು ಮುಂದೆ ಸಾಗಲಾರದೆ ದಯೆ ತೋರಯ್ಯಾ ಎಂದು ಮುಗಿಲಿಗೆ ಮೊರೆ ಇಟ್ಟದ್ದಾದರೆ ಸಾಡೇಸಾತಿಗೆ ವ್ಯಾಜಂ ಎನ್ನಲಾರದೆ?

ಇಂದು ಶನಿವಾರ, ನನಗೆ ಉಪವಾಸ ಎನ್ನುವ ಜನ ಎಷ್ಟಿಲ್ಲ? ಹನು ಮಂತದೇವರ ಗುಡಿಯಲ್ಲಿ, ಶನೀಶ್ವರನ ಗುಡಿಯಲ್ಲಿ ಪ್ರದಕ್ಷಿಣೆ, ನಮಸ್ಕಾರ, ಧೂಪಾರತಿ, ತೆಂಗು-ಬಾಳೇಹಣ್ಣುಗಳ ನೈವೇದ್ಯಗಳನ್ನು ಅರ್ಪಿಸುವ ಭಕ್ತ ವೃಂದವು "ಅಯ್ಯಾ, ಸಾಡೇಸಾತಿಯನ್ನು ಬೇಗನೆ ಕೊನೆಗಾಣಿಸಯ್ಯಾ" ಎಂದು ಅಂಗಲಾಚಿ ಬೇಡಿಕೊಳ್ಳುತ್ತಲಿದೆ. ಎಲೆ ಬೆಪ್ಪ ಮಾನವಾ, ಎಲ್ಲಿದೆ ನಿನ್ನ ಹುಮ್ಮಸ್ಸು? ಎಲ್ಲಿದೆ ನಿನ್ನ ಕರ್ತೃತ್ವಶಕ್ತಿ? ಎಲ್ಲಿದೆ ನಿನ್ನ ಶೌರ್ಯ ಧೈರ್ಯ ಸಾಹಸ? ಎಲ್ಲಿದೆ ನಿನ್ನ ಜ್ಞಾನ ವಿಜ್ಞಾನ ಭಾಂಡಾರ? ಎಲ್ಲಿದೆ ನಿನ್ನ ಅಣು ಶಕ್ತಿ? ಸಾಡೇಸಾತಿಯ ಸೆಳವಿಗೆ ಸಿಕ್ಕು ತಿರುಗಣೆ ಮಡುವಿನಲ್ಲಿ ಗಿರಿಗಿರಿ ತಿರುಗುತ್ತಿರುವಿಯಲ್ಲಾ? ಅಯ್ಯೋ ವಿಧಿಯೇ!! ನಿನ್ನ ವಿಧಾನ ನಮ್ಮಂಥ ಅಲ್ಪರಿಗೆ ತಿಳಿಯಬಹುದೇ? "

ಹುಟ್ಟು ಸಾವುಗಳಿಗೆ ಜೋಡಿಸಿದ ಸೇತುವೆ ಎಂದರೇನೇ ಈ ಜೀವನವು "ಚಕ್ರನೇಮಿಕ್ರಮೇಣ" ಎಂಬಂತೆ ಈ ದ್ವಂದ್ವಗಳ ರೌದ್ರ ಹಿಡಿತದಲ್ಲಿ ಸಿಕ್ಕಿ ರುತ್ತದೆ. ಮುನ್ನೂಚನೆಯನ್ನು ತಿಳಿಸುವ ಅನೇಕ ಸಾಧನೆಗಳಿದ್ದಾಗ್ಯೂ ಮನಸ್ಸು ಅತ್ತ ಹರಿಯದು. ಹಿಂದೆ ಆಗಿಹೋದ ಅನೇಕ ಸಾಮ್ರಾಜ್ಯಗಳ ಅವಶೇಷಗಳನ್ನು ನೋಡಿರಿ ಮಾನವನು ಕಾಲಪುರುಷನ ದಾಸನೆಂಬುದನ್ನು

ಅವು ಸಾರಿಹೇಳುತ್ತವೆ. ಇಂದಿನ ಪುರಪಟ್ಟಣಗಳು, ಗುಡಿಗೋಪುರಗಳು, ನಾಳೆ ಧ್ವಂಸವಾಗಲಾರವೆಂದು ಯಾರು ತಾನೆ ಧೈರ್ಯದಿಂದ ಹೇಳಬಹುದು?

ನಿಜವಾಗಿ ನೋಡಿದರೆ ಇದಕ್ಕೆ ಇಷ್ಟೊಂದು ಅಂಜುವ ಕಾರಣವಿಲ್ಲ ಗ್ರಹಗಳ ಪರಿಭ್ರಮಣಕ್ಕನುಸಾರವಾಗಿ ವಿಶೇಷತಃ ಶನಿಯ ಪರಿಭ್ರಮಣಕ್ಕೆ ಅನುಸಾರವಾಗಿ ಪ್ರತಿಯೊಬ್ಬನ ಜೀವನದಲ್ಲಿ ಸಾಡೇಸಾತಿಯು ಸರತಿಯು ಬಾದೇಬರುತ್ತದೆ. ಶನಿಯ ಪರಿಭ್ರಮಣವು ಒಂದು ರಾಶಿಯಲ್ಲಿ ಎರಡೂವರೆ ವರುಷಗಳವರೆಗೆ ಇರುತ್ತದೆ. ಅಂದರೆ ಹನ್ನೆರಡು ರಾಶಿಗಳನ್ನು ಕ್ರಮಿಸಲು ಮೂವತ್ತು ವರುಷಗಳ ಅವಧಿಯು ಬೇಕು. ಸಾಡೇಸಾತಿಯ ಏಳೂವರೆ ವರ್ಷಗಳನ್ನು ಅದರಲ್ಲಿ ಕಳೆಯಲಾಗಿ ಇಪ್ಪತ್ತೆರಡೂವರೆ ವರ್ಷಗಳು ಸಾಡೇ ಸಾತಿಯಿಂದ ಮುಕ್ತವಿರುತ್ತವೆ. ಅಂದರೆ ಸಾಡೇಸಾತಿಯ ಒಂದು ಸರತಿಯು ಮುಗಿದು ಎರಡನೇ ಬಾರಿಯು ಸುರುವಾಗಲು ಇಪ್ಪತ್ತೆರಡೂವರೆ ವರುಷಗಳು ಬೇಕು. ಅಲ್ಲದೆ ಜೀವನವು ಸುಖದುಃಖಗಳ ಸಮ್ಮಿಶ್ರಣವು. "ಚಕ್ರವತ್ ಪರಿವರ್ತಂತೆ ದುಃಖಾನಿಚ ಸುಖಾನಿಚ" ಎಂಬಂತೆ ದುಃಖದ ನಂತರ ಸುಖವು ಬಂದೇಬರುತ್ತದೆ. ಹಿಂದೂಸ್ಥಾನದ ಹೊರತಾಗಿ ಮಿಕ್ಕ ಯಾವ ದೇಶ ದಲ್ಲಿಯೂ ಸಾಡೇಸಾತಿಗೆ ಪ್ರಾಮುಖ್ಯತೆ ಇಲ್ಲ.

ಒಂದು ದೃಷ್ಟಿಯಲ್ಲಿ ಸಾಡೇಸಾತಿಯು ಮನುಷ್ಯನಿಗೆ ಗತಿನಿರೋಧಕ (Governor) ಇದ್ದಂತೆ. ಜೀವನವನ್ನು ಹದಗೊಳಿಸುವ ವಿಧಿಯ ವಿಧಾನ ಸಮತತ್ವದ ಒಂದು ಸಾಧನೆ. ಅಂಕೆಯಲ್ಲಿಲ್ಲದವರಿಗೆ ಸಂಕೋಲೆ ತೊಡಿಸುವ ನಿಸರ್ಗದ ಕಟ್ಟಳೆ, ಜೀವನದ ತತ್ತ್ವ ತಿಳಿಯದವನಿಗೆ ಇದೊಂದು ತಾತ್ವಿಕ ವಿವೇಚನೆಯ ವಿಶ್ವವಿದ್ಯಾಲಯ. ಕಾಠಿಣ್ಯಕ್ಕೆ ಮೃದುತ್ವ ದಯಪಾಲಿಸುವ ಕಮ್ಮಾರನ ಕುಲುಮೆ, ಕಾಣದ ಕ್ಷಿತಿಜವನ್ನು ತೋರಿಸುವ ದೂರದರ್ಶಕ ಯಂತ್ರ. ಗರ್ವಿಗಳಿಗೆ ಇದೊಂದು ಆಹ್ವಾನ. ಸ್ಥಿರವೆಂದು ತಿಳಿದ ಸಂಗತಿ ಗಳಿಗೆ ಒಂದೇ ರೀತಿಯಲ್ಲಿ ಒಂದೇ ಸ್ಥಿತಿಯಲ್ಲಿ ಉಳಿಯಗೊಡದ ಸೃಷ್ಟಿಯ ಈ ವಿಚಿತ್ರ ಕ್ರಮವು ನಮ್ಮೆಲ್ಲರ ಮೇಲೆ ವಿಕ್ರಮ ಸ್ಥಾಪಿಸುತ್ತದೆ. ಮಾನವನ ಹೃದಯದಲ್ಲಿ ಮನುಷ್ಯತ್ವವನ್ನು ಮೂಡಿಸುವ, ಕಾಲಗರ್ಭದಲ್ಲಿ ಹುದುಗಿದ ಈ ವಿಚಿತ್ರ ರೀತಿಯನ್ನು ನೋಡಿದರೆ, ಈ ವಿಶ್ವವು ನಮಗೆ ಜ್ಞಾನಭಾಂಡಾರ ವನ್ನು ಬಿಚ್ಚಿ ತೋರಿಸುತ್ತಿದೆ ಎಂದು ಅನಿಸಲಾರದೆ? ಆದುದರಿಂದ ಸಾಡೇ ಸಾತಿಗೆ ಅಷ್ಟು ಅಂಜುವ ಕಾರಣವಿಲ್ಲ.

# ೨. ಕುಂಡಲೀ ನಿರೀಕ್ಷಣೆ

ಈ ಸಾಡೇಸಾತಿಯ ಫಲವೇನೆಂಬುದನ್ನು ಊಹಿಸಬೇಕಾದರೆ ಜ್ಯೋತಿಷ್ಯಕ್ಕೆ ಬೇಕಾಗುವ ಎಲ್ಲ ಸಂಗತಿಗಳನ್ನು ಕಲೆಹಾಕಬೇಕು. ಸಾಡೇಸಾತಿಯು ಒಳಿತೋ ಅಥವಾ ಕೆಡಕೋ ಎಂಬುದನ್ನು ಒರೆಗಲ್ಲಿಗೆ ಹಚ್ಚಬೇಕಾದರೆ ವಿವೇಕಕ್ಕೆ ತಿಕ್ಕಿ ನೋಡಬೇಕು. ಸಾಡೇಸಾತಿಯೆಂದರೆ ಕೇವಲ 'ಅನಿಷ್ಟ' ಎಂಬ ಭಾವನೆಯು ಸರಿಯಾದುದಲ್ಲ. ಸರ್ವಸಾಧಾರಣವಾಗಿ ಒಂದು ಮನೆಯಿಂದ ಮನೆಗೆ, ಸ್ಥಾನದಿಂದ ಸ್ಥಾನಕ್ಕೆ (ರಾಶಿಯಿಂದ ರಾಶಿಗೆ) ಒಂದು ಗ್ರಹವು ಪಲ್ಲಟವಾದಾಗ ಅದರ ಪರಿಣಾಮವೇನೆಂಬುದನ್ನು ಆ ಗ್ರಹದ ಪಲ್ಲಟವಾದ ರಾಶಿಯು, ಪಲ್ಲಟವಾದ ಸ್ಥಾನದ, ಆ ಸ್ಥಾನದ ಕಾರಕ ಗ್ರಹದೊಡನೆ ಇರುವ ಸಂಬಂಧ, ಆ ಸ್ಥಾನಾಧೀಶನೊಂದಿಗೆ ಇರುವ ಮೂಲ ಸಂಬಂಧ, ಬೇರೆಬೇರೆ ಗ್ರಹಗಳ ಜೊತೆಗೆ ಇರುವ ಮೂಲ ಹಾಗೂ ತಾತ್ಕಾಲಿಕ ಸಂಬಂಧ, ಪಲ್ಲಟವಾದ ಗ್ರಹದ ಮೂಲ ಸ್ಥಿತಿ, ತತ್ತ್ವ, ಅಧಿಕಾರದ ವ್ಯಾಪ್ತಿ, ಇವುಗಳೆಲ್ಲವನ್ನು ಸಾಮೂಹಿಕವಾಗಿ ತೆಗೆದುಕೊಂಡು ನಿರ್ಧರಿಸಬೇಕಾಗುವುದು

ಈ ಪರಿಣಾಮವು ಅಮುಕ ಕುಂಡಲಿಯ ವ್ಯಕ್ತಿಗೆ ಪೂರಕವೋ ಅಥವಾ ಬಾಧಕವೋ ಯಾವ ದೃಷ್ಟಿಯಲ್ಲಿ ಪೂರಕ, ಯಾವ ದೃಷ್ಟಿಯಲ್ಲಿ ಮಾರಕ ಎಂಬುದನ್ನು ಒಳ್ಳೆಯ ವಿಚಾರಪೂರ್ವಕವಾಗಿ ನಿರ್ಧರಿಸಬೇಕು. ಬೇರೆಬೇರೆ ಗ್ರಹಗಳಿಗೆ ಬೇರೆಬೇರೆ ಸ್ಥಾನಗಳು, ರಾಶಿಗಳು ಇಷ್ಟಾನಿಷ್ಟವಾಗಿ ಇರುತ್ತವೆ.

ಗುರು ಶುಕ್ರಮುಂತಾದವು ಶುಭಗ್ರಹಗಳೆಂದೂ ಶನಿ ಮಂಗಳರು ಕ್ರೂರ ಗ್ರಹಗಳೆಂದೂ ಸಾಮಾನ್ಯ ಕಲ್ಪನೆಯಿದ್ದರೂ ಜೀವನದ ಏಳಿಗೆಯನ್ನು ಶೋಧಿಸುವಲ್ಲಿ ಅದು ಕೆಲಸಕ್ಕೆ ಬಾರದು. ಆದುದರಿಂದ ಶನಿ ಮೊದಲಾದ ಗ್ರಹಗಳು ಅಧಿಕಾರವುಳ್ಳ ಪ್ರಭಾಸ್ವಿತ ಮೊದಲಾದ ಸ್ಥಿತಿಯಲ್ಲಿ ಇದ್ದು ಪರಿಭ್ರಮಣದ ಕಾಲಕ್ಕೆ ಸಾಡೇಸಾತಿಯಲ್ಲಿದ್ದರೂ ಕೂಡ ಬೇರೆ ಅನಿಷ್ಟ ಸಂಬಂಧ ಬಾರದಿದ್ದರೆ, ಅವು ಉತ್ತರೋತ್ತರ ಊರ್ಜಿತದಲ್ಲಿದ್ದರೆ ಮನುಷ್ಯನಿಗೆ ಒಳ್ಳೆಯ ಫಲಗಳೇ ದೊರೆಯುತ್ತವೆ. ಅದ್ದರಿಂದ ಕೇವಲ ಅನಿಷ್ಟ ಎಂಬ

ಭಾವನೆಯ ಅಥವಾ ಗುರು ಮೊದಲಾದ ಶುಭಗ್ರಹವೆಂಬ ಭಾವನೆ ಕೂಡ ಸಲ್ಲದು. ಮೂಲ ಕುಂಡಲಿಯಲ್ಲಿ ಯೋಗಗಳು ಹೇಗಿವೆ, ಯಾವ ಸಂಗತಿಗಳ ಸರ್ವೋತ್ಕೃಷ್ಟ ಫಲವನ್ನು ಮನುಷ್ಯ ಪಡೆದಿದ್ದಾನೆ, ಯಾವ ಸಂಗತಿಗಳು ಲೋಪವಾಗಿವೆ ಎಂಬುದನ್ನು ಮೊದಲು ನಿರ್ಧರಿಸಬೇಕು. ಈ ಫಲಗಳು ಹೇಗೆ ಹಾಗೂ ಎಷ್ಟು ಹೆಚ್ಚುಕಡಿಮೆ ದೊರೆಯುತ್ತವೆ ಎಂಬುದನ್ನು ಗ್ರಹಗಳ ಚಾರಫಲದಿಂದ ನಿರ್ಧರಿಸಬೇಕಾಗುವದು. ಯಾವ ಸಂಗತಿಯು ಜನ್ಮದಾರಭ್ಯ ಸಂಸ್ಕಾರ ರೂಪದಿಂದ ಇಲ್ಲವೋ ಅದು ಗ್ರಹಗಳು ಎಷ್ಟೇ ಶುಭವಾದಾಗ್ಲೂ ದೊರಕಲಾರದು. ಯಾವುದರ ಬಗ್ಗೆ ಲವಲೇಶವಾದರೂ ಕಡಿಮೆ ಇಲ್ಲವೋ ಅದು ಗ್ರಹಗಳು ಎಷ್ಟೇ ಅನಿಷ್ಟ ಪರಿಣಾಮಕಾರಿಯಾದಾಗ್ಲೂ ಕಡಿಮೆಯಾಗಲಾರದು.

ಉದಾ: ಯಾರೊಬ್ಬನ ಜಾತಕದಲ್ಲಿ ಮಾತೃಸುಖ ಅಭಾವವಿದೆ ಅಂತಾ ತಿಳಿಯಿರಿ. ಇಂಥವನಿಗೆ ಗೋಚರಿಯಿಂದ ೧೧ನೇ ಗುರು-ಶನಿ ಬಂದರೂ ಏನು ಪ್ರಯೋಜನ! ಅಥವಾ ಗುರು-ಶುಕ್ರರ ದಶಾಂತರ್ದಶೆ ಬಂದರೂ ಏನು ಪ್ರಯೋಜನ! ಇದರಂತೆ ಇನ್ನೊಬ್ಬನ ಕುಂಡಲಿಯಲ್ಲಿ ಮಾತೃಸೌಖ್ಯ ಚನ್ನಾಗಿ ಇದೆ ಅಂತಾ ತಿಳಿಯಿರಿ. ಇಂಥವನಿಗೆ ಸಾಡೇಸಾತಿ ಬಂದರೂ ಮಾತೃಸೌಖ್ಯದ ಅಭಾವ ಆಗಲಾರದು. ಆದುದರಿಂದ, ಮೂಲ ಕುಂಡಲಿಯಲ್ಲಿಯ ಯೋಗಕ್ಕನುಸಾರವಾಗಿ ಮುಂದಿನ ಫಲಗಳು ಆಗುತ್ತವೆ ಎಂಬುದು ನಿರ್ವಿವಾದ ಸಂಗತಿಯು. ಮೂಲ ಕುಂಡಲಿಯಲ್ಲಿ ವಿಶೇಷ ಶುಭ ಪರಿಣಾಮಕಾರಿ ಗ್ರಹ ಯಾವದು, ವಿಶೇಷ ಅನಿಷ್ಟ ಪರಿಣಾಮಕಾರಿ ಗ್ರಹ ಯಾವದು, ಅವುಗಳ ವ್ಯಾಪ್ತಿ ಎಷ್ಟು ಎಂಬುದನ್ನು ಮೊದಲು ನಿರ್ಧರಿಸಬೇಕಾಗುವದು.

ಕುಂಡಲಿಯಲ್ಲಿ ಆಯಾ ಭಾವಗಳ ಉದಿತಾಂಶದ ಸಮೀಪದಲ್ಲಿ ಇದ್ದ ಗ್ರಹಗಳು ಆ ಭಾವಕ್ಕೆ ವಿಶೇಷ ಪರಿಣಾಮಕಾರಿ ಹಾಗೂ ಯಾವ ಭಾವಗಳ ಒಡೆತನಗಳನ್ನು ಪಡೆದಿವೆಯೊ ಆ ಭಾವಗಳಿಗೂ ಪರಿಣಾಮಕಾರಿ ಆಗುವವು. ಯಾವ ಸಂಗತಿಗಳ ಕಾರಕತ್ವವನ್ನು ಪಡೆದಿವೆಯೊ ಅವಕ್ಕೂ ಪರಿಣಾಮಕಾರಿಯಾಗುವವು. ಈ ಪರಿಣಾಮವನ್ನು ನಿರ್ಧರಿಸಬೇಕಾದರೆ, ಆ ಗ್ರಹಕ್ಕೆ ಕುಂಡಲಿಯಲ್ಲಿಯ ಅಧಿಕಾರವೇನು, ಬೇರೆ ಗ್ರಹಗಳ ಜೊತೆಗೆ ಸಂಬಂಧ ಹೇಗಿವೆ, ಆ ಗ್ರಹವಿದ್ದ ಭಾವದ ಸ್ಥಿತಿಯೇನು ಎಂಬುದನ್ನು ನಿರ್ಧರಿಸಬೇಕು.

ಇದರಲ್ಲಿ ಶುಭ ಸಂಬಂಧವಿದ್ದರೆ ಶುಭವು, ಅನಿಷ್ಟ ಸಂಬಂಧವಿದ್ದರೆ ಅಶುಭವು. ಆ ಗ್ರಹದ ಭಾವದ, ಆ ಗ್ರಹದ ಒಡೆತನವುಳ್ಳ ಭಾವಗಳ ಪರಿಣಾಮವೂ ಕಂಡುಬರುತ್ತದೆ.

ಇದೆಲ್ಲವನ್ನು ತಿಳಿಯಲಿಕ್ಕೆ ಜ್ಯೋತಿಷ್ಯ ಶಾಸ್ತ್ರದ ಮೂಲ ಸಿದ್ಧಾಂತಗಳನ್ನು ಅರಿತುಕೊಳ್ಳಬೇಕು. ಭಾವಗಳು ಏನು ಸೂಚಿಸುತ್ತವೆ, ಒಂದು ಗ್ರಹದ ಒಂದು ಭಾವದಲ್ಲಿಯ ಪರಿಣಾಮವೇನು, ಆ ಭಾವವು ಯಾವ ರಾಶಿಯನ್ನು ತಳೆದಿದೆಯೋ ಆ ರಾಶಿಯಲ್ಲಿಯ ಗ್ರಹದ ಪರಿಣಾಮವೇನು ಎಂಬದನ್ನು ತಿಳಿಯಬೇಕಾಗುವದು.

(೧) ಹನ್ನೆರಡು ಭಾವಗಳು. (೨) ಪ್ರತಿಯೊಂದು ಗ್ರಹದ ಪ್ರತಿಯೊಂದು ಭಾವದಲ್ಲಿಯ ಪರಿಣಾಮ (೩) ಬೇರೆ ಬೇರೆ ರಾಶಿಗಳಲ್ಲಿಯ ಗ್ರಹಗಳು ಏನು ತೋರಿಸುತ್ತವೆ? (೪) ಗ್ರಹಗಳ ಕಾರಕತ್ವ. (೫) ರಾಶಿ ನಕ್ಷತ್ರಗಳು ಏನು ತೋರಿಸುತ್ತವೆ? (೬) ಗ್ರಹಗಳ ಹಾಗೂ ರಾಶಿಗಳ ತತ್ವ. (೭) ಗ್ರಹಗಳ ದೃಷ್ಟಿ–ಉಚ್ಚತ್ವ, ನೀಚತ್ವ, ಮೈತ್ರಿ-ಮೂಲ ತ್ರಿಕೋಣ ಒಡೆತನ, ಪಾಪ–ಶುಭ ಇತ್ಯಾದಿ. (೮) ಅಧಿಕಾರ ವ್ಯಾಪ್ತಿ.

ಕೇಂದ್ರ ತ್ರಿಕೋಣಾಧಿಪತಿಗಳ ಪರಸ್ಪರ ಸಂಬಂಧವಿದ್ದು ಕೇಂದ್ರ ತ್ರಿಕೋಣಾಧಿಪತಿಗಳನ್ನು ಬಿಟ್ಟು ಉಳಿದ ಭಾವಗಳ ಒಡೆತನವುಳ್ಳ ಗ್ರಹಗಳ ಸಂಬಂಧವಿರದಿದ್ದರೆ ಈ ಕೇಂದ್ರ ತ್ರಿಕೋಣಾಧಿಪತಿಗಳು ಯೋಗಕಾರಕರಾಗುತ್ತಾರೆ. ಹಾಗೂ ಒಳ್ಳೆಯ ಫಲವನ್ನು ತೋರಿಸುತ್ತಾರೆ. ಗ್ರಹಗಳ ಯೋಗವು ನಾಲ್ಕು ತೆರವಾಗಿ ಆಗುತ್ತದೆ. (೧) ಸ್ಥಾನ ಸಂಬಂಧ (೨) ದೃಷ್ಟಿ ಸಂಬಂಧ, (೩) ಏಕತ್ರ ಸ್ಥಿತಿ, (೪) ಮಿತ್ರತ್ವ ಸ್ಥಿತಿ.

ಸೂರ್ಯ–ಚಂದ್ರರನ್ನು ಬಿಟ್ಟು ಉಳಿದ ಪ್ರತಿಯೊಂದು ಗ್ರಹಕ್ಕೆ ಎರಡೆರಡು ರಾಶಿಗಳ ಒಡೆತನವು ಇರುತ್ತದೆ. ಹೆಚ್ಚಾಗಿ ಗ್ರಹದ ಮೂಲ ತ್ರಿಕೋಣ ರಾಶಿಯೇ ಪರಿಣಾಮಕಾರಿಯಾಗುತ್ತದೆ. ಶುಭ ಗ್ರಹಗಳಿಗೆ ಕೇಂದ್ರಾಧಿಪತ್ಯವು ಒಳ್ಳೆಯದಲ್ಲ. ಕೇಂದ್ರ ಸ್ಥಾನಗಳಲ್ಲಿ ಲಗ್ನಕ್ಕಿಂತ ಚತುರ್ಥವೂ, ಚತುರ್ಥಕ್ಕಿಂತ ಸಪ್ತಮವೂ, ಹಾಗೂ ಸಪ್ತಮಕ್ಕಿಂತ ದಶಮಸ್ಥಾನವೂ ಹೆಚ್ಚು ಬಲಶಾಲಿಯಾಗಿರುತ್ತವೆ, ಪಾಪಗ್ರಹಗಳು ಈ ಸ್ಥಾನಗಳಲ್ಲಿ ಅಧಿಪತಿತ್ವವನ್ನು ಹೊಂದಿದರೂ ಹೆಚ್ಚೆಚ್ಚು ಬಲಶಾಲಿಗಳಾಗುತ್ತವೆ.

ಹಾಗೆಯೇ ಕೇಂದ್ರಾಧಿಪತ್ಯ ದೋಷವು ಚಂದ್ರನಿಗಿಂತ ಬುಧನಿಗೆ, ಬುಧನಿಗಿಂತ ಗುರುವಿಗೆ, ಗುರುವಿಗಿಂತ ಶುಕ್ರನಿಗೆ ಹೆಚ್ಚು ಇರುತ್ತದೆ. ಕೇಂದ್ರ ಸ್ಥಾನಗಳಲ್ಲಿ ಲಗ್ನಕ್ಕಿಂತ ಚತುರ್ಥದ, ಚತುರ್ಥಕ್ಕಿಂತ ಸಪ್ತಮದ, ಸಪ್ತಮಕ್ಕಿಂತ ದಶಮದ ಒಡೆತನ ಹೆಚ್ಚು ಅನಿಷ್ಟದಾಯಕವು. ಶುಭಗ್ರಹಗಳ ಈ ತರಹದ ದೋಷವನ್ನು ಹೊಂದಿದಂಥ, ಬಲಶಾಲಿಗಳಾಗಿರುವ ಗ್ರಹಗಳಾದ ಗುರು ಶುಕ್ರರು ಮಾರಕ ಸ್ಥಾನಗಳಲ್ಲಿ ಇದ್ದುದಾದರೆ ಈ ಗ್ರಹಗಳೇ ದೋಷಕಾರಿಯಾಗಿ ಪರಿಣಮಿಸುತ್ತವೆ. ಆದುದರಿಂದ ಜ್ಯೋತಿಷ್ಯದ ಮೂಲಭೂತ ಸಿದ್ಧಾಂತಗಳನ್ನು ಮೊದಲು ತಿಳಿದುಕೊಳ್ಳಬೇಕು.

# ೩. ಜ್ಯೋತಿಷ್ಯದ ಮೂಲಭೂತ ಸಿದ್ಧಾಂತಗಳು

ಒಂದು ನಿಮಿಷ ತಲೆಯೆತ್ತಿ ಮೇಲಕ್ಕೆ ನೋಡಿರಿ. ನಿಮಗೆ ಕಾಣುವ ದೇನು? ಕಲ್ಪನೆಗೆ ನಿಲುಕದ ಅನಂತ ಆಕಾಶ! ಇದನ್ನು ನೋಡುವ ಹವ್ಯಾಸ ಎಷ್ಟು ಜನರಿಗೆ ಇದೆ! ಇದರಲ್ಲಿ ಹುದುಗಿದ ಗೌಪ್ಯವನ್ನು ಹೊರಗೆಡವ ಬೇಕೆಂದು, ಮಾನವನ ಮನಸ್ಸು ಸಹಸ್ರಾರು ವರ್ಷಗಳಿಂದ ಹಾತೊರೆಯುತ್ತಿಲ್ಲವೇ? ರಾತ್ರಿಯಲ್ಲಿ ನಿರಭ್ರವಾದ ಆಕಾಶದ ಕಡೆಗೆ ನೋಡಿರಿ. ಮಲ್ಲಿಗೆ ಹೂವುಗಳನ್ನು ಹರುಷದಿಂದ ತೂರಿದ ಹಾಗೆ ಇರುವ ನಕ್ಷತ್ರ ಸಮೂಹವು ನಿಮ್ಮನ್ನು ಬೇರೊಂದು ಜಗತ್ತಿಗೆ ಕರೆದೊಯ್ಯುತ್ತದೆ, ಅದೋ ನೋಡಿರಿ! ಅದೊಂದು ಚಿಕ್ಕ ತಾರೆ. ಅದು ಸ್ವತಂತ್ರ ಅಸ್ತಿತ್ವವುಳ್ಳ ಸ್ವಯಂಪ್ರಕಾಶಿತ ಗೋಲ. ಈ ತಾರೆಗಳು ನಮ್ಮಿಂದ ನಮ್ಮ ಕಲ್ಪನೆಗೆ ನಿಲುಕದಷ್ಟು ದೂರ ಇವೆ. ಜ್ಯೋತಿಷ್ಯ ಶಾಸ್ತ್ರದಲ್ಲಿ ಬರುವ ಅಶ್ವಿನಿ, ಭರಣಿ, ಕೃತ್ತಿಕಾ ಮುಂತಾದ ನಕ್ಷತ್ರಗಳು ಒಂದೊಂದು ಸ್ವತಂತ್ರ ತಾರೆಗಳಿರದೆ ತಾರಕಾಪುಂಜವೆಂದು ನಮ್ಮ ಪೂರ್ವಜರು ಹೇಳಿದ್ದಾರೆ. ಪ್ರತಿಯೊಂದು ನಕ್ಷತ್ರದಲ್ಲಿಯ ತಾರೆಗಳ ಸಂಖ್ಯೆ ಭಿನ್ನಭಿನ್ನವೆಂದು ಅವರ ಅಭಿಪ್ರಾಯ.

ಉದಾ :- ಶತತಾರಕಾ ನಕ್ಷತ್ರದಲ್ಲಿ ೧೦೦ ತಾರೆಗಳಿವೆ ಎಂದು ಕೆಲವರೂ, ಶತತಾರಕಾ ನಕ್ಷತ್ರದಲ್ಲಿ ಅನೇಕ (ಅಸಂಖ್ಯ) ತಾರೆಗಳಿವೆ ಎಂದು ಮತ್ತೆ ಹಲವರೂ ಹೇಳುತ್ತಾರೆ. ಹೀಗೆ ಒಂದೊಂದು ತಾರಕಾಪುಂಜವೂ ಒಂದೊಂದು ಹೆಸರನ್ನು ತಳೆದಿದೆ.

ಈ ನಕ್ಷತ್ರಗಳು ಒಂದೊಂದು ಸೌರಮಾಲೆಯನ್ನು ತೋರಿಸುತ್ತವೆಯೋ ಏನೋ ಎಂಬುವಂತಿವೆ. ಈ ತಾರಕಾಪುಂಜಗಳು ನಮ್ಮ ಸೌರಮಾಲೆಯನ್ನು ಒಂದು ವರ್ತುಳದಲ್ಲಿ ಆವರಿಸಿದಂತಿವೆ. ನಮ್ಮ ಸೌರಮಾಲೆಯ ಭ್ರಮಣ ಮಾರ್ಗಕ್ಕೆ ನೇರವಾಗಿ ಸಂಬಂಧಿಸಿದ್ದ ಕಾರಣ ಜ್ಯೋತಿಷ್ಯ ಶಾಸ್ತ್ರದಲ್ಲಿ ಈ ೨೭ ನಕ್ಷತ್ರಗಳಿಗೆ ಸ್ಥಾನ ಬಂದಿದೆ. ಅವುಗಳ ಪರಿಣಾಮವು ಉಳಿದ ನಕ್ಷತ್ರಗಳಿಗಿಂತ ಹೆಚ್ಚು ತೀವ್ರವಾಗಿರುವುದರಿಂದಲೂ ಅವುಗಳಿಂದ ಬರುವ ಪ್ರಕಾಶವು

ಈ ಸೌರಮಾಲೆಗೆ ಬೇಗನೆ ಪರಿಣಾಮ ತಲುಪಿಸುವದರಿಂದಲೇ ಈ (ಅಶ್ವಿನಿ, ಭರಣಿ ಮೊದಲಾದ ನಕ್ಷತ್ರಗಳೊಂದಿಗೆ) ನಮ್ಮ ಸಂಬಂಧ ಬಂದದ್ದುಂಟು.

ಈ ನಕ್ಷತ್ರಗಳಲ್ಲಿ ೧೨ ಭಾಗ ಮಾಡಿ ರಾಶಿಗಳನ್ನು ಕಲ್ಪಿಸಿದ್ದಾರೆ. ಈ ರಾಶಿಗಳ ಕಲ್ಪನೆಯು ಕೂಡ ಒಂದು ತತ್ವದ ಮೇಲೆ ಆಧಾರಿತವಾಗಿದೆ. ವಿಭಜಿತ ನಕ್ಷತ್ರಗಳ ಸಾಮೂಹಿಕ ಪರಿಣಾಮವು ಒಂದೇ ಕಲ್ಪನೆಯನ್ನು ಕೊಡುತ್ತದೆ. ಉದಾಹರಣೆಗಾಗಿ: ಮೇಷ ರಾಶಿಯನ್ನೇ ತೆಗೆದುಕೊಳ್ಳಿರಿ. ಅಶ್ವಿನಿ, ಭರಣಿ, ಕೃತ್ತಿಕೆಯ ಕಾಲು ಭಾಗ ಸೇರಿ ಈ ರಾಶಿಯಾದಿದ್ದುಂಟು. ಈ ನಕ್ಷತ್ರಗಳ ಸಾಮೂಹಿಕ ಆಕಾರವನ್ನು ನೋಡಿರಿ, ಅದು ಕುರಿಯ ಆಕಾರದಂತೆ ಕಾಣುವದಿಲ್ಲವೇ? ಈ ಎಲ್ಲ ನಕ್ಷತ್ರಗಳ ಸಾಮೂಹಿಕ ಪರಿಣಾಮವೇನೆಂಬದನ್ನು ಶಾಸ್ತ್ರದಲ್ಲಿ ಹೇಳಲಾಗಿದೆ. ಈ ರಾಶಿಯು ಚರ ರಾಶಿಯು, ಅಗ್ನಿ ತತ್ವದ ರಾಶಿಯು, ಪುರುಷ ರಾಶಿಯು ಎಂದು ಮುಂತಾಗಿ ಹೇಳಲಾಗಿದೆ. ಈ ಪರಿಣಾಮವು ಕೂಡ, ಆ ನಕ್ಷತ್ರದ ಆಯಾ ಗುಣಗಳ ಮಟ್ಟವನ್ನು ಸೂಚಿಸುತ್ತದೆ. ಆದುದರಿಂದ ಈ ರಾಶಿ ನಕ್ಷತ್ರಗಳಿಗೆ ಸಂಬಂಧಿಸಿದ ಗ್ರಹಗಳು ಪೂರಕವಾಗಿ ಅಥವಾ ಮಾರಕವಾಗಿ ಪರಿಣಾಮವನ್ನುಂಟು ಮಾಡುತ್ತವೆ. ೩೬೦ ಅಂಶದ ವರ್ತುಳದಲ್ಲಿ ೨೭ ನಕ್ಷತ್ರಗಳು, ೧೨ ರಾಶಿಗಳು ನಮ್ಮನ್ನು ಆವರಿಸಿವೆ.

ಇನ್ನು ನಮ್ಮ ಸೌರಮಾಲೆಯಲ್ಲಿಯ ಸೂರ್ಯನು ಸ್ವಯಂಪ್ರಕಾಶಿತ ಗೋಲ. ಉಳಿದ ಗ್ರಹಗಳು ಈ ಸೂರ್ಯನಿಂದಲೇ ಪ್ರಕಾಶಹೊಂದಿ ಬೆಳಗುತ್ತವೆ. ಸೂರ್ಯಮಾಲೆಯಲ್ಲಿಯ ಗ್ರಹಗಳ ಕ್ರಮವು ಇಂತಿದೆ:—

ಸೂರ್ಯ, ಬುಧ, ಶುಕ್ರ, ಚಂದ್ರ, ಪೃಥ್ವಿ, ಮಂಗಳ, ಗುರು, ಶನಿ, ಹರ್ಷಲ್, ನೆಪ್ಚೂನ್, ಪ್ಲ್ಯುಟೋ.

ಚಂದ್ರನು ನಮ್ಮ ಪೃಥ್ವಿಯ ಉಪಗ್ರಹ. ಗುರು, ಶನಿ ಗ್ರಹಗಳಿಗೂ ಉಪಗ್ರಹಗಳುಂಟು. ಈ ಎಲ್ಲ ಗ್ರಹಗಳೂ ಸೂರ್ಯನ ಸುತ್ತಲು ತಿರುಗುತ್ತವೆ. ನಮ್ಮ ಪೃಥ್ವಿಯೂ ಕೂಡ ಸೂರ್ಯನ ಸುತ್ತಲು ತಿರುಗುತ್ತದೆ ಎಂದು ವಿಜ್ಞಾನವು ಹೇಳುತ್ತದೆ. ಆದರೆ ಪೃಥ್ವಿಯು ಒಲಿದು (ವಾಗಿ) ತಿರುಗುವಿಕೆ ಹಾಗೂ ದೈನಂದಿನ ಗತಿಗಳ ಮೂಲಕ ನಮಗೆ ಸೂರ್ಯನ ಬೇರೆ ಬೇರೆ

ರಾಶಿಗಳಲ್ಲಿಯ ಭ್ರಮಣದ ಪರಿಣಾಮವಾಗುತ್ತದೆ. ಈ ಗ್ರಹಗಳು ಪ್ರದಕ್ಷಿಣೆಯನ್ನು ಮುಗಿಸುವ ಒಂದು ನಿಯಮವಿದೆ. ಅವು ಒಂದು ನಿರ್ದಿಷ್ಟ ಮಾರ್ಗದಿಂದಲೇ ಭ್ರಮಿಸುತ್ತವೆ, ಹಾಗೂ ಈ ಗ್ರಹಗಳ ಭ್ರಮಣಕ್ಕೆ ಹಿಡಿಯುವ ಅಂದರೆ ಬೇಕಾಗುವ ವೇಳೆಯ ಕಲ್ಪನೆಯೂ ಕೂಡ ಉಂಟು. ನಮ್ಮ ಪೃಥ್ವಿಯು ಸೂರ್ಯನ ಸುತ್ತಲು ತಿರುಗಿ ಪುನಃ ಅದೇ ಸ್ಥಾನಕ್ಕೆ ಬರುವ ವೇಳೆಗೆ ಒಂದು ಸೌರವರ್ಷವೆಂದು ಕರೆಯುತ್ತೇವೆ. ವೇಳೆ ಅಂದರೇನು ಎಂಬುದನ್ನು ತಿಳಿಯುವುದು ಸುಲಭವಲ್ಲ. ಅದನ್ನು ವ್ಯಾಖ್ಯೆಗೆ ಒಳಪಡಿಸುವ ವಿಧಾನವನ್ನು ಈ ಶತಕದಲ್ಲಿ ಐನ್‌ಸ್ಟೈನರಂಥ ವಿಜ್ಞಾನಿಗಳು ಮಾತ್ರ ಅರಿತಿದ್ದಾರೆ. ನಮ್ಮ ಸೌರರೂಪದ ಆಧಾರದ ಮೇಲಿಂದ ಬೇರೆ ಬೇರೆ ಗ್ರಹಗಳ ಪರಿಭ್ರಮಣಕ್ಕೆ ಬೇಕಾಗುವ ಅವಧಿಯನ್ನು ಪೂರ್ವಜರು ಅಳೆದಿದ್ದಾರೆ. ಸೂರ್ಯನಿಂದ ಗ್ರಹವು ಎಷ್ಟೆಷ್ಟು ಹೆಚ್ಚು ದೂರವಿರುತ್ತದೆಯೋ ಅಷ್ಟೇ ಹೆಚ್ಚು ಸಮಯವು ಅದರ ಒಂದು ಪ್ರದಕ್ಷಿಣೆಗೆ ತಗಲುತ್ತವೆ. ಈ ಪ್ರದಕ್ಷಿಣೆಯನ್ನು ಅತಿ ತೀವ್ರ ಮುಗಿಸುವ ಗ್ರಹಗಳೆಂದರೆ ಬುಧ ಹಾಗೂ ಶುಕ್ರರು. ಪಂಚಾಂಗದಲ್ಲಿ ಕೂಡ ಈ ಪರಿಭ್ರಮಣದ ಬಾಹ್ಯ ರೇಖೆಗಳನ್ನು ಕಾಣಬಹುದು. ಒಂದೊಂದು ಗ್ರಹಕ್ಕೆ ಒಂದೊಂದು ರಾಶಿಯನ್ನು ದಾಟುವ ಅವಧಿಯು ಬೇರೆ ಬೇರೆ ಇರುತ್ತದೆ. ರವಿ, ಬುಧ, ಶುಕ್ರರಿಗೆ ಸುಮಾರು ಒಂದು ತಿಂಗಳು; ಮಂಗಳನಿಗೆ ೧। ತಿಂಗಳು, ಗುರುವಿಗೆ ೧೩ ತಿಂಗಳು, ಶನಿಗೆ ೨॥ ವರ್ಷ ಹೀಗೆ ಪ್ರಮಾಣವಿದೆ. ಹರ್ಷಲ್ ಮೊದಲಾದ ಗ್ರಹಗಳ ಪರಿಭ್ರಮಣ, ಪರಿಣಾಮ ಮುಂತಾದ ಸಂಗತಿಗಳು ಪಾಶ್ಚಿಮಾತ್ಯ, ಪೌರ್ವಾತ್ಯ ಜ್ಯೋತಿಷಿಗಳ ಅಭ್ಯಾಸಕ್ಕೊಳಪಟ್ಟಿವೆ.

೨೭ ನಕ್ಷತ್ರಗಳು (ಅಶ್ವಿನಿ, ಭರಣಿ ಇತ್ಯಾದಿ) ಮತ್ತು ೧೨ ರಾಶಿಗಳು ಎಂದು ಈ ಮೊದಲೇ ಹೇಳಿದೆ. ಒಂದು ನಕ್ಷತ್ರಕ್ಕೆ ೪ ಚರಣಗಳು. ೨। ನಕ್ಷತ್ರಗಳೆಂದರೆ ಒಂದು ರಾಶಿಯು. ಒಂದು ರಾಶಿಯು ೩೦ ಅಂಶವಿದ್ದು ೩೬೦ ಅಂಶದ ವರ್ತುಳದಲ್ಲಿ ೧೨ ರಾಶಿಗಳು ಬರುತ್ತವೆ. ಒಂದು ನಕ್ಷತ್ರದ ಒಂದು ಚರಣವು ೩ ಅಂಶ - ೨೦' ಉಳ್ಳದ್ದಿರುತ್ತದೆ. ಈ ಹನ್ನೆರಡು ರಾಶಿಗಳು (ಮೇಷ, ವೃಷಭ ಇತ್ಯಾದಿ) ಕಾಲಪುರುಷನ ಅಂಗಗಳನ್ನು ತೋರಿಸುತ್ತವೆ. ಅದು ಇಂತಿದೆ :

ಮೇಷ— ಕಾಲಪುರುಷನ ತಲೆಯ ಭಾಗ, ವೃಷಭ—ಮುಖ, ಮಿಥುನ –ಎದೆಯ ಭಾಗ, ಕರ್ಕ—ಹೃದಯ, ಸಿಂಹ—ಹೊಟ್ಟೆ, ಕನ್ಯಾ—ಟೊಂಕ (ನಡು), ತುಲಾ—ಬಸ್ತಿ, ವೃಶ್ಚಿಕ –ಗುದ, ಧನು – ತೊಡೆಗಳು, ಮಕರ —ಮೊಣಕಾಲು, ಕುಂಭ—ಗುಂಡದ ಭಾಗ, ಮೀನ - ಪಾದಗಳು.

## ರಾಶಿಗಳ ಆಕಾರ

ಮೇಷ–ಟಗರು, ವೃಷಭ-ಎತ್ತು, ಮಿಥುನ ಪುರುಷನ ಕೈಯಲ್ಲಿ ಗದೆಯೂ ಮತ್ತು ಸ್ತ್ರೀಯಳ ಕೈಯಲ್ಲಿ ವೀಣೆಯೂ ಇದ್ದ ದಂಪತಿ, ಕರ್ಕ—ಏಡಿ, ಸಿಂಹ—ಸಿಂಹ, ಕನ್ಯಾ—ಒಂದು ಕೈಯಲ್ಲಿ ಸಸಿ ಹಾಗೂ ಒಂದು ಕೈಯಲ್ಲಿ ಅಗ್ನಿ ಹಿಡಿದು ಹಡಗದಲ್ಲಿದ್ದ ಕನ್ಯೆ, ತುಲಾ ತಕ್ಕಡಿ, ವೃಶ್ಚಿಕ—ಚೇಳು, ಧನು—ಕೆಳಭಾಗ ಕುದುರೆಯಂತೆ ಮೇಲ್ಭಾಗ ಧನುರ್ಧಾರಿಯಂತಿದ್ದ ಆಕಾರ, ಮಕರ—ಜಿಗರೆಯಂತೆ ಮುಖವುಳ್ಳ ಮೊಸಳೆ, ಕುಂಭ—ಕೈಯಲ್ಲಿ ಕೊಡವನ್ನು ಹಿಡಿದ ಮನುಷ್ಯನ ಆಕಾರ, ಮೀನ--ವಿರುದ್ಧ ದಿಶೆಯಲ್ಲಿಯ ಎರಡು ಅವಳಿಜವಳಿ ಮೀನುಗಳ ಆಕಾರ.

## ರಾಶಿಗಳ ದಿಕ್ಕುಗಳು

ಪೂರ್ವ – ಮೇಷ, ಸಿಂಹ, ಧನು, ದಕ್ಷಿಣ – ವೃಷಭ, ಕನ್ಯಾ, ಮಕರ. ಪಶ್ಚಿಮ – ಮಿಥುನ, ತುಲಾ, ಕುಂಭ. ಉತ್ತರ—ಕರ್ಕ, ವೃಶ್ಚಿಕ, ಮೀನ ರಾಶಿಗಳು ಆಯಾ ದಿಕ್ಕುಗಳಲ್ಲಿ ಬಲಿಷ್ಠವಾಗಿರುತ್ತವೆ.

ಕಾಲಬಲ—ಮೇಷ, ವೃಷಭ, ಮಿಥುನ, ಕರ್ಕ, ಧನು, ಮಕರ ಇವು ರಾತ್ರಿಯ ಸಮಯಕ್ಕೆ ಹೆಚ್ಚು ಬಲಶಾಲಿಯಾಗಿರುತ್ತವೆ. ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ರಾಶಿಗಳು ಹಗಲಿನಲ್ಲಿ ಬಲಶಾಲಿಯಾಗಿರುತ್ತವೆ. ಮೀನ ರಾಶಿಯು ಉಭಯ ಕಾಲದಲ್ಲಿ ಬಲಶಾಲಿಯಾಗಿರುತ್ತದೆ.

ಕನ್ಯಾ, ಮಿಥುನ, ಕುಂಭ, ತುಲಾ, ಧನು ರಾಶಿಯ ಮೊದಲನೇ ಭಾಗ ಇವು ದ್ವಿಪದ ಅಥವಾ ಮನುಷ್ಯ ರಾಶಿಗಳಿದ್ದು ಲಗ್ನದಲ್ಲಿ ಹೆಚ್ಚು ಬಲಶಾಲಿಯಾಗಿರುತ್ತವೆ. ಮಕರ ರಾಶಿಯ ಎರಡನೇ ಭಾಗ ಹಾಗೂ ಮೀನ, ಕರ್ಕ

ರಾಶಿಗಳು ಜಲಚರ ರಾಶಿಗಳಿದ್ದು ಚತುರ್ಥ ಸ್ಥಾನದಲ್ಲಿ ಹೆಚ್ಚು ಬಲಶಾಲಿಯಾಗಿರುತ್ತವೆ. ವೃಶ್ಚಿಕ ರಾಶಿಗೆ ಏಳನೇ ಸ್ಥಾನದಲ್ಲಿ ಬಲ ಹೆಚ್ಚು.

**ಕಾಲ**—ಮನುಷ್ಯ ರಾಶಿಗಳು ಹಗಲಿನಲ್ಲಿಯೂ ಚತುಷ್ಪಾದ ರಾಶಿಗಳು ರಾತ್ರಿಯಲ್ಲಿಯೂ ಮತ್ತು ಕೀಟಕ ರಾಶಿಗಳು ಸಂಧಿ ಕಾಲದಲ್ಲಿಯೂ ಬಲಾಢ್ಯವಾಗಿರುತ್ತವೆ.

**ವರ್ಣ**—ಕರ್ಕ, ವೃಶ್ಚಿಕ, ಮೀನ ಇವು ವಿಪ್ರ ವರ್ಣ; ಮೇಷ. ಸಿಂಹ ಧನು ಇವು ಕ್ಷತ್ರಿಯ ವರ್ಣ; ಮಿಥುನ, ತುಲಾ, ಕುಂಭ ಶೂದ್ರ ವರ್ಣ; ವೃಷಭ, ಕನ್ಯಾ, ಮಕರ ಇವು ವೈಶ್ಯ ವರ್ಣ. ಹೀಗೆ ವರ್ಣಗಳನ್ನು ತೋರಿಸುತ್ತವೆ.

**ವಿಹೀನತ್ವ**—ಮೇಷ, ವೃಷಭ, ಸಿಂಹ ರಾಶಿಗಳು ಮಧ್ಯ ರಾತ್ರಿಯಲ್ಲಿಯೂ ಕರ್ಕ, ಮಿಥುನ, ಕನ್ಯಾ ಮಧ್ಯಾಹ್ನದಲ್ಲಿಯೂ ಕುರುಡು ಇರುತ್ತವೆ. ತುಲಾ, ವೃಶ್ಚಿಕ ಇವು ಮಧ್ಯಾಹ್ನದ ಮೊದಲು, ಧನು ಮಕರಗಳು ಮಧ್ಯಾಹ್ನನಂತರ ಕಿವುಡು ಇರುತ್ತವೆ.

**ಬಣ್ಣ**—ಮೇಷ-ರಕ್ತದಂತೆ ಕೆಂಪು, ವೃಷಭ-ಬೆಳ್ಳಗೆ, ಮಿಥುನ-ಗಿಳಿ ಹಸಿರು, ಕರ್ಕ-ಗುಲಾಬಿ, ಸಿಂಹ-ಹೊಳೆಯುವ ಬಿಳಿ ಬಣ್ಣ, ಕನ್ಯಾ-ಚಿತ್ರ ಚಿತ್ರದ ಬಣ್ಣ (ಅನೇಕ ತರಹದ), ತುಲಾ-ನೀಲ ಹಾಗೂ ಕಪ್ಪು, ವೃಶ್ಚಿಕ-ಬಂಗಾರದ ಬಣ್ಣ (ಕೆಂಪು ಹಳದಿ ಮಿಶ್ರ), ಧನು ನಾಶೀಪುಡಿ ಬಣ್ಣ, ಮಕರ-ಕನ್ಯಾ ರಾಶಿಯ ಬಣ್ಣದ ಹಾಗೆಯೆ, ಆದರೆ ಸ್ವಲ್ಪ ನಿಸ್ತೇಜ, ಕುಂಭ-ತೇಜವುಳ್ಳ ನಾಶೀಪುಡಿ ಬಣ್ಣ, ಮೀನ-ಬೆಳ್ಳಗೆ ನಿಸ್ತೇಜ.

**ಪದಾರ್ಥ**—ಮೇಷ-ವಸ್ತ್ರ ಮುಂತಾದವುಗಳು, ವೃಷಭ-ಅಕ್ಕಿ ಮುಂತಾದ ಮುಂಗಾರಿ ಧಾನ್ಯಗಳು, ಮಿಥುನ-ಅಡವಿಯಲ್ಲಿಯ ಹಣ್ಣುಗಳು, ಕರ್ಕ-ಊರಿನಲ್ಲಿ ಬೆಳೆಯುವ ಹಣ್ಣುಹಂಪಲಗಳು, ಸಿಂಹ-ಗೋದಿ ಮುಂತಾದ ಹಿಂಗಾರಿ ಧಾನ್ಯಗಳು, ಕನ್ಯಾ-ಬಿದಿರು, ತುಲಾ-ಎಳ್ಳು, ಹೆಸರು ಮೊದಲಾದವುಗಳು, ವೃಶ್ಚಿಕ ಕಬ್ಬು ಹಾಗೂ ಅದರ ಪದಾರ್ಥಗಳು, ಧನು-ಕಬ್ಬಿಣ ಹಾಗೂ ಶಸ್ತ್ರಗಳು ಮಕರ-ಬಂಗಾರ ಮುಂತಾದ ಧಾತುಗಳು, ಕುಂಭ-ಕಮಲ ಮುಂತಾದ ಹೂಗಳು, ಮೀನ-ನೀರಿನಿಂದ ಆಗುವ ಎಲ್ಲ ಪದಾರ್ಥಗಳು.

## ಗ್ರಹಗಳು ರಾಶಿಗಳಿಗೆ ಅಧಿಪತಿ

ರಾಶಿ ಸ್ವಾಮಿತ್ವ— ಮೇಷ, ವೃಶ್ಚಿಕಗಳಿಗೆ ಮಂಗಳ; ವೃಷಭ, ತುಲಾಗಳಿಗೆ ಶುಕ್ರ; ಕರ್ಕ ರಾಶಿಗೆ-ಚಂದ್ರ; ಸಿಂಹ ರಾಶಿಗೆ-ರವಿ; ಮಿಥುನ ಕನ್ಯಾ ರಾಶಿಗಳಿಗೆ ಬುಧ; ಧನು, ಮೀನ ರಾಶಿಗಳಿಗೆ-ಗುರು; ಮಕರ, ಕುಂಭ ರಾಶಿಗಳಿಗೆ ಶನಿಯು— ಹೀಗೆ ಆಯಾ ರಾಶಿಗಳಿಗೆ ಆಯಾ ಗ್ರಹಗಳು ಅಧಿಪತಿಯಾಗಿರುತ್ತವೆ.

ಗ್ರಹಗಳ ಮೂಲ ತ್ರಿಕೋಣ ರಾಶಿ-ರವಿಗೆ ಸಿಂಹ ರಾಶಿಯು, ಚಂದ್ರನಿಗೆ ವೃಷಭ ರಾಶಿಯು, ಮಂಗಳನಿಗೆ-ಮೇಷ ರಾಶಿಯು, ಬುಧನಿಗೆ-ಕನ್ಯಾ ರಾಶಿಯು, ಗುರುವಿಗೆ-ಧನು ರಾಶಿಯು, ಶುಕ್ರನಿಗೆ-ತುಲಾ ರಾಶಿಯು, ಶನಿಗೆ-ಕುಂಭ ರಾಶಿಯು— ಹೀಗೆ ಆಯಾ ಗ್ರಹಗಳಿಗೆ ಆಯಾ ರಾಶಿಗಳು ಮೂಲ ತ್ರಿಕೋಣವಾಗಿರುತ್ತವೆ. ಶುಕ್ರ, ಶನಿ, ರವಿ, ಗುರು ಇವರು ನಮ್ಮ ಮೂಲ ತ್ರಿಕೋಣ ರಾಶಿಗಳಲ್ಲಿ 20 ಅಂಶಗಳ ವರೆಗೆ ಮಾತ್ರ ಮೂಲ ತ್ರಿಕೋಣಗಳಾಗಿರುತ್ತಾರೆ, ಮುಂದೆ ಸ್ವಕ್ಷೇತ್ರಿಗಳಾಗುತ್ತಾರೆ. ಚಂದ್ರನು ವೃಷಭದ 3 ಅಂಶಗಳ ವರೆಗೆ ಉಚ್ಚನಾಗಿದ್ದು ಮುಂದೆ ಮೂಲ ತ್ರಿಕೋಣನಾಗುತ್ತಾನೆ. ಮೇಷದಲ್ಲಿ ಮಂಗಳನು 12 ಅಂಶಗಳ ವರೆಗೆ ಮಾತ್ರ ಮೂಲ ತ್ರಿಕೋಣದಲ್ಲಿರುತ್ತಾನೆ, ಮುಂದೆ ಸ್ವಕ್ಷೇತ್ರೀಯನಾಗುತ್ತಾನೆ. ಬುಧನು ಕನ್ಯಾ ರಾಶಿಯಲ್ಲಿ 15 ಅಂಶಗಳವರೆಗೆ ಉಚ್ಚನಾಗಿಯೂ ಮುಂದೆ 15 ಅಂಶಗಳ ವರೆಗೆ ಮೂಲ ತ್ರಿಕೋಣದಲ್ಲಿಯೂ ಹಾಗೂ ಅಮೇಲೆ ಸ್ವಕ್ಷೇತ್ರದಲ್ಲಿಯೂ ಇರುತ್ತಾನೆ. ರಾಹುವಿನ ಸ್ವಕ್ಷೇತ್ರ ಕನ್ಯಾ ರಾಶಿಯು; ಮಿಥುನವು ಉಚ್ಚ ರಾಶಿಯು; ಹಾಗೂ ಕುಂಭ ರಾಶಿಯು ಮೂಲ ತ್ರಿಕೋಣ ರಾಶಿಯು; ಕೇತುವಿಗೆ ಮೀನ ರಾಶಿಯು ಸ್ವಕ್ಷೇತ್ರ; ಧನು ಉಚ್ಚ ರಾಶಿಯು; ಸಿಂಹ ರಾಶಿಯು ಮೂಲ ತ್ರಿಕೋಣ.

ಲಗ್ನ, ಹೋರಾ, ದ್ರೇಷ್ಕಣ, ಸಪ್ತಮಾಂಶ, ನವಮಾಂಶ, ದಶಾಂಶ, ದ್ವಾದಶಾಂಶ, ಷೋಡಶಾಂಶ, ತ್ರಿಶಾಂಶ ಹೀಗೆ ದಶವರ್ಗಗಳಿದ್ದು ಇವುಗಳಿಂದ ಮನುಷ್ಯನ ಜೀವಿತದ ಎಲ್ಲ ಸಂಗತಿಗಳನ್ನು ತಿಳಿಯಬಹುದು. ಇವುಗಳನ್ನು ಕಂಡುಹಿಡಿಯುವ ಕ್ರಮವು ಗಣಿತ ಭಾಗದಲ್ಲಿ ಬರುತ್ತದೆ.

## ಭಾವಗಳು

| | | | |
|---|---|---|---|
| ವ್ಯಯ | ತನು | ಧನ | ಸಹಜ |
| ಲಾಭ | | | ಸುಖ |
| ಕರ್ಮ | | | ಸುತ |
| ಭಾಗ್ಯ | ಮೃತ್ಯು | ಜಾಯಾ | ರಿಪು |

(೧) **ತನು**—ಶರೀರ, ಬಣ್ಣ, ಮೈಕಟ್ಟು, ಸ್ವಭಾವ, ಯಶ, ಗುಣ, ಸುಖ, ದುಃಖ, ತೇಜ, ಮಾನಸಿಕ ಹಾಗೂ ದೈಹಿಕ ಬಲಾಬಲ

(೨) **ಧನ**— ದ್ರವ್ಯ, ಕಣ್ಣು, ಕುಟುಂಬ ಸುಖ, ವಿದ್ಯಾ, ವಾಣಿ, ಅನ್ನ, ಇತ್ಯಾದಿ.

(೩)°**ಸಹಜ**—ಒಡಹುಟ್ಟಿದವರು, ಅಣ್ಣ-ತಮ್ಮ, ಅಕ್ಕ-ತಂಗಿ ಹಾಗೂ ಅವರ ಪರಿಸ್ಥಿತಿ, ಪರಾಕ್ರಮ, ಸಾಹಸ, ಶಬ್ದ, ಕಿವಿ, ಅಲಂಕಾರ ಹಾಗೂ ವಸ್ತ್ರಗಳು, ಧೈರ್ಯ ಶಕ್ತಿಗಳನ್ನು ತೋರಿಸುವ ಅವಕಾಶ, ಹಾಗೂ ಪ್ರವಾಸ.

(೪) **ಸುಖ**— ಎಲ್ಲ ತರಹದ ಪ್ರಾಪಂಚಿಕ ಸೌಖ್ಯ, ವಿದ್ಯಾ, ತಾಯಿ, ಸುಗಂಧೀ ದ್ರವ್ಯಗಳು, ಚತುಷ್ಪಾದ ಪ್ರಾಣಿಗಳ ಪ್ರಾಪ್ತಿ, ಆಸ್ತಿವರ್ಗ ಮನೋಧರ್ಮ, ರಾಜವಾಹನಗಳು, ಹೊಲ-ಮನೆ. ಗದ್ದೆ-ವಾಡೆ, ಬಂಗಲೆ ಗಳು-ವಾಹನಗಳು, ನಿದ್ರೆ, ಹೃದಯ.

(೫) **ಸುತ**—ಈಶ್ವರ ಹಾಗೂ ಸಂಸ್ಕಾರದ ಬಗ್ಗೆ ಬೋಧ, ಸಂತತಿ, ಬುದ್ಧಿ, ಬುದ್ಧಿಯ ಒಲವು-ಷಣ್ಮ ಉಪಾಸನೆಯ ಅಧಿದೈವತ, ವಿದ್ಯೆ, ಮಂತ್ರ, ತಂತ್ರ ಇಂದ್ರಜಾಲ, ಗರ್ಭ.

(೬) **ರಿಪು**—ರೋಗ ಶತ್ರು, ವ್ಯಸನ, ಕ್ಷಯ. ಗಾಯ. ಸೋದರ ಮಾವಾದಿ ತಾಯಿಯ ಸಂಬಂಧಿಕರು, ಸೇವಾ ಭಯ, ಕ್ಲೇಶ, ಉಪದಂಶ.

(೭) ಜಾಯಾ — ಯಾತ್ರಾ, ವ್ಯಾಧ್ಯ, ಸ್ವಕುಟುಂಬ ಸೌಖ್ಯ, ಮದುವೆ, ಕಾಮವಾಸನಾ, ಪ್ರವಾಸ, ಕಳೆದುಹೋದ ಹಾಗೂ ಮರೆತ ಸಂಗತಿಗಳು, ಭಾಗೇದಾರಿ ವ್ಯಭಿಚಾರ, ನ್ಯಾಯಮಂದಿರ, ಯುದ್ಧ, ಮೂತ್ರಾಶಯ,

(೮) ಮೃತ್ಯು — ಆಯುಷ್ಯ ಸಂಕಟ ಗಂಡಾಂತರಗಳು, ಆಕಸ್ಮಿಕ ಧನಪ್ರಾಪ್ತಿ. ಅನಿಷ್ಟ ಹೇತು-ಪತ್ರದ್ವಾರ ದ್ರವ್ಯ ಮರಣಕ್ಕೆ ಕಾರಣ, ಗುಹ್ಯ ಅಂಗಾಂಗಗಳು.

(೯) ಭಾಗ್ಯ — ಹೋದ ಜನ್ಮದ ಮಾಡಿದಂತರ ಬಂದ ಸಂಸ್ಕಾರಗಳು ಹಾಗೂ ಅದರ ಭಾಗ್ಯ; ಉಪಾಸನೆಯ ಶಕ್ತಿ, ಗುರು ಧರ್ಮ, ತಪಸ್ಸು, ಶುಭ ಕಾರ್ಯಗಳು. ಸಾಮಾಜಿಕ ಹಾಗೂ ಲೌಕಿಕ ಕಾರ್ಯಗಳು ಆಧ್ಯಾತ್ಮಿಕ ಒಲವು-ದೂರದ ಪ್ರವಾಸ.

(೧೦) ಕರ್ಮ — ಆಜ್ಞೆ ಕೆಲಸ. ದಿವ್ಯ ಅಲಂಕಾರದ ಪೋಷಾಕು, ವ್ಯಾಪಾರ, ಶೇತಕಿ, ಸನ್ಯಾಸ, ವೇದಾಂತ, ಜೀವನೋದ್ಯೋಗ, ಕೀರ್ತಿ, ಯಶಸ್ಸು, ಜ್ಞಾನ, ಪಿತಾ. ರಾಜಕೀಯ ಸಂಗತಿ, ನೌಕರಿ, ಯಜ್ಞ ಯಾಗಾದಿಗಳು.

(೧೧) ಲಾಭ — ಎಲ್ಲ ಪ್ರಕಾರದ ದ್ರವ್ಯಪ್ರಾಪ್ತಿ. ವಾಹನ ಸೌಖ್ಯ, ಮಿತ್ರ ಸೌಖ್ಯ.

(೧) ವ್ಯಯ — ದುರ್ಗತಿ, ದಾತೃತ್ವ ಶಯನಸುಖ. ಧನನಾಶ ಮೋಕ್ಷ. ಗುಪ್ತಶತ್ರು ರಾಜದಂಡ. ದಾರಿದ್ರ್ಯ. ಕಾರಾಗೃಹ ಗಂಡಾಂತರಗಳು ಹೀಗೆ ಮೇಲೆ ಕಾಣಿಸಿದಂತೆ ಆಯಾ ಭಾವಗಳಿಂದ ಆಯಾ ಸಂಗತಿಗಳ ಬಗ್ಗೆ ಮಹತ್ವದ ಅಂಶಗಳು ತಿಳಿಯುತ್ತವೆ

ನೈಸರ್ಗಿಕ ಶುಭಗ್ರಹಗಳು - ಚಂದ್ರ ಬುಧ, ಗುರು ಶುಕ್ರ.

ನೈಸರ್ಗಿಕ ಪಾಪಗ್ರಹಗಳು-ಕ್ಷೀಣಚಂದ್ರ. ಪಾಪಗ್ರಹಗಳ ಜೊತೆಗೆ ಇದ್ದ ಬುಧ, ರವಿ. ಮಂಗಳ, ಶನಿ, ರಾಹು ಕೇತು. ಶುಭ ಗ್ರಹಗಳಲ್ಲಿ ಗುರು ಶುಕ್ರರು ವಿಶೇಷ ಶುಭ ಫಲವುಳ್ಳವರು. ಪಾಪಗ್ರಹಗಳಲ್ಲಿ ಶನಿ ಮಂಗಳರು ವಿಶೇಷ ಪಾಪ ಫಲವುಳ್ಳವರಾದುದರಿಂದ 'ಕ್ರೂರ ಗ್ರಹ'ಗಳೆಂಬ ಸಂಜ್ಞೆ ಉಂಟು. ಚಂದ್ರನಿಗೆ ಶುದ್ಧ ಪ್ರತಿಪದೆಯಿಂದ ದಶಮಿಯವರೆಗೆ ಮಧ್ಯಮ;

ಮುಂದೆ ಹತ್ತು ದಿವಸ ಪೂರ್ಣ ಬಲ ಹಾಗೂ ಅದರ ಮುಂದೆ ಅವನು ಬಲಹೀನ.

## ಗ್ರಹಗಳ ಅವಸ್ಥೆ

ಅವಸ್ಥಾ :—(೧) ದೀಪ್ತ (೨) ಸ್ವಸ್ಥ (೩) ಮುದಿತ (೪) ಶಾಂತ (೫) ಶಕ್ತ (೬) ಪೀಡಿತ (೭) ದೀನ (೮) ಖಲ (೯) ವಿಕಲ (೧೦) ಭೀತ.

ಗ್ರಹವು ಉಚ್ಚ ಅಥವಾ ಮೂಲ ತ್ರಿಕೋಣದಲ್ಲಿ ಇದ್ದರೆ ದೀಪ್ತ; ಸ್ವಗ್ರಹದಲ್ಲಿ ಇದ್ದರೆ ಸ್ವಸ್ಥ; ಮಿತ್ರಗ್ರಹದಲ್ಲಿದ್ದರೆ ಮುದಿತ; ಶುಭಗ್ರಹದ ವರ್ಗದಲ್ಲಿ ಇದ್ದರೆ ಶಾಂತ; ಗ್ರಹವು ಪೃಥ್ವಿಯ ಸಮೀಪಕ್ಕೆ ಬಂದಾಗ್ಗೆ ಅತಿ ದೇದೀಪ್ಯಮಾನವಿರುತ್ತದೆ. ಅಗ್ಗೆ ಗ್ರಹದ ಅವಸ್ಥೆಗೆ 'ಶಕ್ತ' ಅವಸ್ಥೆ ಅನ್ನುತ್ತಾರೆ. ಬೇರೊಂದು ಗ್ರಹದಿಂದ ಆಚ್ಛಾದಿತವಿದ್ದರೆ ಆ ಸಮಯಕ್ಕೆ ಗ್ರಹವು ಪೀಡಿತ ಅವಸ್ಥೆಯಲ್ಲಿರುತ್ತದೆ. ಶತೃಗ್ರಹದಲ್ಲಿದ್ದರೆ 'ದೀನಾವಸ್ಥೆ' ಅನ್ನುತ್ತಾರೆ. ನೀಚಮನೆಯಲ್ಲಿ ಇದ್ದರೆ 'ಭೀತ' ಅವಸ್ಥೆ ಎನ್ನುತ್ತಾರೆ. ಹಾಗೂ ಗ್ರಹವು ಅಸ್ತಂಗತವಿದ್ದರೆ ಅದಕ್ಕೆ ವಿಕಲಾವಸ್ಥೆ ಅನ್ನುತ್ತಾರೆ.

## ಕೆಲವು ಪಾರಿಭಾಷಿಕ ಶಬ್ದಗಳು

**ಕೇಂದ್ರ** :—ಕುಂಡಲಿಯಲ್ಲಿಯ ಲಗ್ನ, ಚತುರ್ಥ, ಸಪ್ತಮ, ದಶಮ ಸ್ಥಾನಗಳಿಗೆ ಕೇಂದ್ರ ಸ್ಥಾನವೆನ್ನುತ್ತಾರೆ.

**ತ್ರಿಕೋಣ** :—ಪಂಚಮ ಸ್ಥಾನ ಹಾಗೂ ನವಮ ಸ್ಥಾನಗಳಿಗೆ **ತ್ರಿಕೋಣವೆನ್ನುತ್ತಾರೆ.**

**ಪಣಫರ** :—ಕೇಂದ್ರದ ಮುಂದಿನ ಸ್ಥಾನಗಳು ಅಂದರೆ ೨-೫-೮-೧೧ನೆಯ ಸ್ಥಾನಗಳು,

**ಆಪೋಕ್ಲಿಮ** :—ಕೇಂದ್ರದ ಹಿಂದಿನ ಮನೆಗಳು ೧೨-೩-೬-೯.

**ಚತುರಸ್ರ** :—೪-೮ನೇ ಸ್ಥಾನಗಳು.

**ಉಪಚಯ** :—೩-೬-೧೦-೧೧ನೇ ಸ್ಥಾನಗಳು.

**ಅಪಚಯ** :—ಉಪಚಯ ಸ್ಥಾನಗಳನ್ನು ಬಿಟ್ಟು ಉಳಿದವು.

## ಗ್ರಹಗಳು ಹಾಗೂ ಕಾರಕತ್ವ ಇತ್ಯಾದಿ

ಗ್ರಹಗಳು:—ರವಿ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ.

ಛಾಯಾಗ್ರಹಗಳು :—ರಾಹು, ಕೇತು.

ರವಿ, ಚಂದ್ರ :—ರಾಜಮನೆತನ, ಅಧಿಕಾರ ವ್ಯಾಪ್ತಿ; ಗುರು, ಶುಕ್ರ-ಮಂತ್ರಿಗಳು; ಬುಧ-ಯುವರಾಜ; ಮಂಗಳ-ಸೇನಾಪತಿ, ಶನಿ, ರಾಹುಕೇತು-ಸೇವಕರು.

ರವಿ :- ರಾಜಸತ್ತೆಯ ದ್ಯೋತಕ; ಚಂದ್ರ-ಪ್ರಜಾಪಕ್ಷ.

ಶುಕ್ರ :— ರಾಜಪಕ್ಷದ ಮಂತ್ರಿ, ಗುರು-ಪ್ರಜಾಪಕ್ಷದ ಮಂತ್ರಿ.

ರವಿ, ಚಂದ್ರರು:- ವಿಶೇಷ ಪ್ರಕಾಶವುಳ್ಳ; ಗ್ರಹಗಳು ಉಳಿದವು ತಾರಾತ್ಮಕ ಪ್ರಕಾಶವುಳ್ಳ ಗ್ರಹಗಳು. ರಾಹು-ಕೇತು ಛಾಯಾ ಗ್ರಹಗಳು.

## ಗ್ರಹಗಳ ಗುಣ

ರವಿ, ಚಂದ್ರ, ಗುರು - ಸತ್ವಗುಣ; ಬುಧ, ಶುಕ್ರ—ರಜಸ್ ಗುಣ; ಶನಿ, ಮಂಗಳ, ರಾಹು, ಕೇತು - ತಮೋಗುಣ.

## ಗ್ರಹಗಳು ಹಾಗೂ ಸಪ್ತಧಾತು

ರವಿ-ಅಸ್ಥಿ, ಚಂದ್ರ-ರಕ್ತ, ಮಂಗಳ-ಮಜ್ಜಾ, ಬುಧ-ತ್ವಚಾ, ಗುರು-ವಸಾ (ಎಲುಬು,) ಶುಕ್ರ-ಧಾತು, ಶನಿ-ಸ್ನಾಯು.

## ಗ್ರಹಗಳ ದೃಷ್ಟಿ

ಎಲ್ಲ ಗ್ರಹಗಳು ತಮ್ಮ ಸ್ಥಾನದಿಂದ ಏಳನೆಯ ಸ್ಥಾನವನ್ನು ನೋಡುತ್ತವೆ. ಮಂಗಳ, ಗುರು, ಶನಿ ಇವರಿಗೆ ವಿಶೇಷ ದೃಷ್ಟಿಯುಂಟು. ಮಂಗಳನು ಏಳನೇ ಸ್ಥಾನದ ಹೊರತಾಗಿ ೪-೮ನೇ ಸ್ಥಾನಗಳನ್ನೂ ನೋಡುತ್ತಾನೆ. ಗುರುವು ಏಳನೇ ಸ್ಥಾನದ (ತನ್ನಿಂದ ಏಳನೇ ಸ್ಥಾನ) ಹೊರತಾಗಿ ೫-೯ ನೇ ಸ್ಥಾನಗಳನ್ನೂ ಶನಿಯು ೩ನೇ, ೧೦ ನೇ ಸ್ಥಾನಗಳನ್ನೂ ನೋಡುತ್ತಾರೆ.

## ಗ್ರಹಗಳ ಸ್ಥಾನ ಬಲ

ಗ್ರಹಗಳು ಉಚ್ಚ, ಮೂಲತ್ರಿಕೋಣ, ಮಿತ್ರ ಗ್ರಹದ ಮನೆಯಲ್ಲಿ, ತಮ್ಮ ದ್ರೇಷ್ಕಾಣದಲ್ಲಿ, ತಮ್ಮ ತಮ್ಮ ನವಾಂಶಗಳಲ್ಲಿ ಇದ್ದರೆ ಸ್ಥಾನಬಲಗಳೆಂದು ತಿಳಿಯಬೇಕು,

## ಗ್ರಹಗಳ ಶತೃತ್ವ-ಮಿತ್ರತ್ವ

| ಗ್ರಹ | ಮಿತ್ರಗ್ರಹ | ಸಮ | ಶತೃಗ್ರಹ |
|---|---|---|---|
| ರವಿ | ಚಂದ್ರ, ಮಂಗಳ, ಗುರು | ಬುಧ | ಶುಕ್ರ, ಶನಿ, ರಾಹು, ಕೇತು |
| ಚಂದ್ರ | ರವಿ, ಬುಧ | ಗುರು | ಮಂಗಳ, ಶುಕ್ರ, ಶನಿ, ರಾಹು, ಕೇತು |
| ಮಂಗಳ | ರವಿ, ಚಂದ್ರ ಗುರು | ಶುಕ್ರ | ಬುಧ, ಶನಿ |
| ಬುಧ | ರವಿ, ಶುಕ್ರ | ಶನಿ, ಗುರು, ಮಂಗಳ | ಚಂದ್ರ |
| ಗುರು | ರವಿ, ಚಂದ್ರ, ಮಂಗಳ | ಶನಿ | ಶುಕ್ರ, ಬುಧ |
| ಶುಕ್ರ | ಬುಧ, ಶನಿ | ಮಂಗಳ, ಗುರು | ರವಿ, ಚಂದ್ರ |
| ಶನಿ | ಶುಕ್ರ, ಬುಧ | ಗುರು | ರವಿ,ಚಂದ್ರ, ಮಂಗಳ |
| ರಾಹು | ಗುರು,ಮಂಗಳ | ಶನಿ,ಶುಕ್ರ | ರವಿ, ಚಂದ್ರ |
| ಕೇತು | ಬುಧ, ಮಂಗಳ | " | " |

## ಗ್ರಹಗಳಿಂದ ವಿಚಾರಿಸತಕ್ಕ ಸಂಗತಿಗಳು

ರವಿ— ಆತ್ಮಾ, ತಂದೆ, ತೇಜ, ಆರೋಗ್ಯ, ಶಕ್ತಿ, ಸಂಪತ್ತು.
ಚಂದ್ರ —ಮನಸ್ಸು, ರಾಜಕೃಪೆ, ಯಶಸ್ಸು, ತಾಯಿ, ಸಂಪತ್ತು.
ಮಂಗಳ— ಸಾಮರ್ಥ್ಯ, ಜಮೀನು.
ಬುಧ— ವಿದ್ಯೆ, ಬುದ್ಧಿ, ಆಪ್ತವರ್ಗ, ಪಾಪ, ಆಟಚ, ಮಿತ್ರ, ವಾಣಿ,
ಗುರು — ಜ್ಞಾನ, ದ್ರವ್ಯ, ಶಾರೀರಿಕ ಬಲ, ಸಂಪತ್ತು.
ಶುಕ್ರ — ಪತ್ನಿ, ಸ್ತ್ರೀ, ವಾಹನ, ಅಲಂಕಾರ, ರತಿಸುಖ ಇತ್ಯಾದಿ
ಶನಿ — ಆಯುಷ್ಯ, ಧಂದೆ, ಮೃತ್ಯುವಿನ ಕಾರಣ, ವಿಪತ್ತು.
ರಾಹು — ತಂದೆಯ ತಂದೆ.
ಕೇತು — ತಾಯಿಯ ತಂದೆ.

## ಅಧಿಕಾರ ವ್ಯಾಪ್ತಿ

ಭಾವ, ರಾಶಿ ಹಾಗೂ ರಾಶಿಗಳ ಅಧಿಪತಿಗಳನ್ನು ತಿಳಿದುಕೊಂಡ ಮೇಲೆ ಗ್ರಹಗಳ ದೃಷ್ಟಿಯನ್ನು ತಿಳಿದುಕೊಂಡು ಇಷ್ಟ ಹಾಗೂ ಅನಿಷ್ಟ ವನ್ನು ಕೆಳಗಿನ ನಿಯಮಗಳಿಗನುಸಾರವಾಗಿ ವಿಚಾರಿಸಬೇಕು.

೧) ತ್ರಿಕೋಣಾಧಿಪತಿಗಳು ಯಾವಾಗಲೂ ಶುಭಫಲವನ್ನೇ ಕೊಡು ತ್ತಾರೆ. ತ್ರಿಕೋಣಾಧಿಪರು ಪಾಪಗ್ರಹಗಳಿದ್ದಾಗ್ಯೂ ಕೂಡ ಶುಭಫಲ ವನ್ನೇ ಕೊಡುತ್ತಾರೆ.

೨) ೩-೬-೧೧ನೇ ಭಾವಗಳ ಅಧಿಪತಿಗಳು ಪಾಪ ಫಲವನ್ನು ಕೊಡುತ್ತಾರೆ. ಅದರಲ್ಲಿಯೂ ೩ಕ್ಕಿಂತ ೬ಕ್ಕಿಂತ, ೧೧ನೇ ಸ್ಥಾನದ ಅಧಿಪತಿ ಯು ಹೆಚ್ಚು ಬಲಶಾಲಿಯಾಗಿರುತ್ತಾನೆ.

೩) ೨-೧೨ನೇ ಸ್ಥಾನಗಳ ಅಧಿಪತಿಗಳು ಯಾವ ಗ್ರಹಗಳ ಜೊತೆಗೆ ಇರುತ್ತಾರೋ ಹಾಗೆ ಫಲವು ದೊರೆಯುತ್ತದೆ. ಯಾವ ಅವಸ್ಥೆ ಯಲ್ಲಿ ಇರುತ್ತಾರೆಯೋ ಹಾಗೆ ಫಲ ದೊರೆಯುತ್ತದೆ. ಸ್ವತಂತ್ರರಿದ್ದರೆ ಅವರ ನೈಸರ್ಗಿಕ ಫಲವು ದೊರೆಯುತ್ತದೆ.

೪) ಅಷ್ಟಮಾಧಿಪನು ಯಾವಾಗಲು ಅಶುಭನು [ ಬಹಳೇ ]. ಆದರೆ ಈ ಅಷ್ಟಮಾಧಿಪತಿತ್ವ ದೋಷವು ಸೂರ್ಯ ಚಂದ್ರರಿಗೆ ತಟ್ಟುವ ದಿಲ್ಲ; ಅಂದರೆ ಅವರು ದೋಷಕಾರಿಗಳಾಗುವದಿಲ್ಲ.

## ಯೋಗ

೧) ಕೇಂದ್ರ ತ್ರಿಕೋಣಾಧಿಪತಿಗಳ ಪರಸ್ಪರ ಸಂಬಂಧವಾದದ್ದಾ ದರೆ ಅದು ವಿಶೇಷವಾಗಿ ಶುಭ ಫಲವನ್ನು ಕೊಡುವಂತಹದು. ಈ ಕೇಂದ್ರ ತ್ರಿಕೋಣ ಅಧಿಪತಿಗಳ ಸಂಬಂಧದಲ್ಲಿ ಬೇರೆ ಭಾವಗಳ ಸಂಬಂಧ ಬರಬಾರದು.

೨) ಕೇಂದ್ರ ತ್ರಿಕೋಣಾಧಿಪತಿಗಳಿಗೆ ಬೇರೆ ದೋಷಗಳಿದ್ದಾಗ್ಯೂ ಅವರ ಪರಸ್ಪರ ಸಂಬಂಧವು ಒಳ್ಳೆಯದೇ ಅಂದರೆ ಶುಭ ಫಲದಾಯಕವು.

೩) ನವಮ, ದಶಮ ಭಾವಗಳ ಯೋಗವು ಹೆಚ್ಚು ಅಧಿಪತಿಗೆ ಬಲಶಾಲಿ, ಅಂದರೆ ರಾಜಯೋಗ ಕಾರಕವು.

೪) ಪಂಚಮ, ನವಮಾಧಿಪತಿಗಳೊಂದಿಗೆ ಯಾವದೊಂದು

ಕೇಂದ್ರಾಧಿಪತಿಯ ( ಬಲವಾನ ) ಸಂಬಂಧ ಬಂದಿದ್ದರೆ ರಾಜಯೋಗ ಉಂಟಾಗುತ್ತದೆ.

೫) ಯಾವ ಗ್ರಹಗಳು ನೈಸರ್ಗಿಕ ಪಾಪ ಫಲವನ್ನುಂಟುಮಾಡುತ್ತವೆಯೋ ಅವು ದೋಗಕಾರಕ ಗ್ರಹಗಳ ಸಂಬಂಧದಿಂದ ಅನಿಷ್ಟ ಫಲವನ್ನು ಕೊಡುವದಿಲ್ಲ.

೬) ಕೇಂದ್ರಾಧಿಪ ಹಾಗೂ ತ್ರಿಕೋಣಾಧಿಪ ಇವರು ಒಬ್ಬೊಬ್ಬರೇ ವಿಶೇಷ ಪ್ರಕಾರದ ಸಂಬಂಧದಿಂದ ಯೋಗಕಾರಕರಾಗುತ್ತಾರೆ. ಬೇರೆ ತ್ರಿಕೋಣದ ಸಂಬಂಧ ಬಂದಿದ್ದರೆ ಅದೂ ಕೂಡ ಒಳ್ಳೆಯ ರಾಜಯೋಗವೆ.

೭) ರಾಹು ಕೇತು ಈ ಛಾಯಾಗ್ರಹಗಳೂ ಕೂಡ ಕೇಂದ್ರ ತ್ರಿಕೋಣಗಳಲ್ಲಿ ಇದ್ದು ಕೇಂದ್ರ ಹಾಗು ತ್ರಿಕೋಣಾಧಿಪತಿಗಳೊಂದಿಗೆ ಯೋಗ ಮಾಡುತ್ತಿದ್ದರೆ ಈ ಗ್ರಹಗಳೂ ಯೋಗಫಲವನ್ನೇ ಕೊಡುತ್ತವೆ.

೮) ನವಮ ಮತ್ತು ದಶಮದ ಅಧಿಪತಿಗಳಿಗೆ ಅಷ್ಟಮ ಲಾಭಗಳ ಒಡೆತನವಿದ್ದರೆ ಇವರು ಯೋಗಕಾರಕರಾಗುವದಿಲ್ಲ.

೯) ೩-೮ನೇ ಸ್ಥಾನಗಳು ಆಯುಷ್ಯ ಸ್ಥಾನಗಳು. ೩ ಕ್ಕಿಂತ ೮ ಹೆಚ್ಚು ಬಲಶಾಲಿ. ೨-೭ ಇವು ಮಾರಕ ಸ್ಥಾನಗಳು. ಇವುಗಳಲ್ಲಿ ೭ ಹೆಚ್ಚು ಬಲಶಾಲಿ. ಈ ಮಾರಕ ಸ್ಥಾನಗಳಲ್ಲಿ ನೈಸರ್ಗಿಕ ಪಾಪ ಗ್ರಹಗಳು ಅಧಿಕಾರವಿಹೀನವಾಗಿದ್ದು, ಈ ಸ್ಥಾನದ ಅಧಿಪತಿಗಳ ಸಂಬಂಧ ಬಂದುದಾದರೆ ಆ ಜಾತಕಗಳಿಗನುಸಾರವಾಗಿ, ದಶಾ ಅಂತರ್ದಶಾಗಳಲ್ಲಿ ಮಾರಕರಾಗುತ್ತಾರೆ. ಮಾರಕದ ಸಂಬಂಧವುಳ್ಳ ನೈಸರ್ಗಿಕ ಪಾಪಗ್ರಹವೆಂದರೆ ಶನಿಯು. ಆದರೆ ಕುಂಡಲಿಯಲ್ಲಿ ಶನಿಯು ಶುಭನಾಗಿದ್ದರೆ ಮಾತ್ರ ಮಾರಕನಾಗಲಾರನು.

೧೦) ಕೇಂದ್ರ ತ್ರಿಕೋಣಾಧಿಪತಿಗಳು ಸ್ವತಂತ್ರ ರೀತಿಯಲ್ಲಿ ಬಲಶಾಲಿಗಳಾಗಿದ್ದರೆ ಶುಭಫಲವನ್ನು ಕೊಡುತ್ತಾರೆ. ಅಂದರೆ ತಮ್ಮ ಭಾಗ ಹಾಗೂ ಕಾರಕತ್ವದ ಪ್ರಕಾರ ಶುಭ ಫಲವನ್ನು ಕೊಡುತ್ತಾರೆ. ಹಾಗೂ ಕೇಂದ್ರ ತ್ರಿಕೋಣಾಧಿಪರ ಪರಸ್ಪರ ಸಂಬಂಧವು ಬಂದುದಾದರೆ ರಾಜಯೋಗವಾಗುತ್ತದೆ. ಹಾಗೂ ಇವರ ಪರಿಣಾಮ ವಿಶೇಷ ರೀತಿಯಲ್ಲಿ ಶುಭವಾಗಿರುತ್ತದೆ.

(i) ಅನ್ಯೋನ್ಯರಾಶಿ ಸಂಬಂಧ — ಉದಾ : ಗುರುವು ಮಂಗಳನ ರಾಶಿಯಲ್ಲಿ ಅಂದರೆ ಮೇಷ, ವೃಶ್ಚಿಕಗಳಲ್ಲಿ ಹಾಗೂ ಮಂಗಳನು ಧನು ಮೀನಗಳಲ್ಲಿ ಇದ್ದು, ಅವರಿಬ್ಬರೂ ಕೇಂದ್ರ ತ್ರಿಕೋಣಾಧಿಪರಾಗಿದ್ದರೆ ಇದು ಒಳ್ಳೆಯ ಯೋಗವು.

(ii) ಪರಸ್ಪರ ದೃಷ್ಟಿ ಸಂಬಂಧ .... ಎರಡು ಗ್ರಹಗಳು ಒಂದನ್ನೊಂದು ನೋಡುವದು. ಉದಾ : ಮೇಷ ರಾಶಿಯಲ್ಲಿ ಮಂಗಳನಿದ್ದು, ತುಲಾದಲ್ಲಿ ಶುಕ್ರನಿದ್ದಾನೆಂದು ತಿಳಿಯುವಾ. ಯಾವದೇ ಎರಡು ಮಿತ್ರ ಗ್ರಹಗಳು ಒಂದನ್ನೊಂದು ನೋಡುವದು ಶುಭಸಂಬಂಧವು.

(iii) ಅನ್ಯತ್ರ ದೃಷ್ಟಿ ಸಂಬಂಧ— ಮಿಥುನದಲ್ಲಿ ಗುರುವಿದ್ದು ತುಲಾದಲ್ಲಿ ಮಂಗಳನಿದ್ದರೆ, ಗುರುವಿನ ದೃಷ್ಟಿ ಮಂಗಳನ ಮೇಲೆ ಇರುವದು. ಆದರೆ ಮಂಗಳನ ದೃಷ್ಟಿಯು ಗುರುವಿನ ಮೇಲೆ ಇರುವುದಿಲ್ಲ. ಇಂಥ ಸಂಬಂಧಕ್ಕೆ ಅನ್ಯತ್ರ ದೃಷ್ಟಿ ಸಂಬಂಧವೆಂದು ಹೆಸರು.

(iv) ಸಹವಾಸ ಸಂಬಂಧ— ಎರಡೂ ಗ್ರಹಗಳು ( ಯೋಗಕಾರಕ ಗ್ರಹಗಳು ) ಒಂದೇ ರಾಶಿಯಲ್ಲಿಒಂದೇ ಭಾವದಲ್ಲಿ ಇರುವವು.

ಮೇಲೆ ವಿವರಿಸಿದ ನಾಲ್ಕು ಪ್ರಕಾರದ ಯೋಗಗಳು ಉತ್ತರೋತ್ತರ ಹೆಚ್ಚು ಯೋಗಕಾರಕಗಳು, ಅಂದರೆ ೧ನೇ ಪ್ರಕಾರದ ಸಂಬಂಧವು ಹೆಚ್ಚು ಒಳ್ಳೆಯದು. ಕೇಂದ್ರ ತ್ರಿಕೋಣಾಧಿಪತಿಗಳು ಕೇಂದ್ರ ತ್ರಿಕೋಣಗಳಲ್ಲಿ ಬಂದುದಾದರಂತೂ ಉತ್ತಮ. ನವಮ-ದಶಮಗಳಲ್ಲಿ ಈ ಯೋಗವು ರಾಜಯೋಗಕಾರವು, ಉಳಿದ ಕೇಂದ್ರ ತ್ರಿಕೋಣಗಳಲ್ಲಿ ಸ್ವಲ್ಪ ಕಡಿಮೆ ಫಲ,ಹಾಗೂ ಇನ್ನುಳಿದ ಭಾವಗಳಲ್ಲಿ ಇದಕ್ಕಿಂತಲೂ ಕಡಿಮೆ.

(೧೧) ಗ್ರಹಗಳು ತಮ್ಮ ಭಾವ ಅಧಿಕಾರ ಸ್ಥಿತಿಯಂತೆ ಯಾವಾಗಲು ಫಲವನ್ನು ಕೊಡುತ್ತವೆ. ತಮ್ಮ ದಶೆ, ಅಂತರ್ದಶೆಗಳಲ್ಲಿ ವಿಶೇಷ ಫಲವನ್ನು ಕೊಡುತ್ತವೆ.

(೧೨) ಗ್ರಹಗಳು ಮೇಲೆ ಹೇಳಿದ ಸಂಬಂಧಳ್ಳವುಗಳಾಗಿದ್ದರೆ ಅಥವಾ ತಮಗೆ ಅನುಸರಿಸಿ ಫಲವನ್ನು ಕೊಡುವ ಗ್ರಹಗಳ ಜೊತೆಗೆ ಸಂಬಂಧವುಳ್ಳವುಗಳಾಗಿದ್ದರೆ ತಮ್ಮ ದಶಾ ಅಂತರ್ದಶೆಗಳಲ್ಲಿ ಆ ಫಲಗಳನು ಕೊಡುತ್ತವೆ.

(೧೩) ದಶಾನಾಥನ ವಿರುದ್ಧ ಗುಣಧರ್ಮವುಳ್ಳ ಗ್ರಹಗಳ ಅಂತರ್ದಶೆಯಲ್ಲಿ ಅಶುಭಫಲವೇ ಸಿಗುವದು.

(೧೪) ಕೇಂದ್ರಾಧಿಪತಿಯ ದಶೆಯಲ್ಲಿ ತ್ರಿಕೋಣಾಧಿಪತಿಯ ಅಂತರ್ದಶೆಯೂ ತ್ರಿಕೋಣಾಧಿಪತಿಯ ದಶಾದೊಳಗೆ ಕೇಂದ್ರಾಧಿಪತಿಯ ಅಂತರ್ದಶೆಯೂ ಶುಭವಾಗುತ್ತವೆ. ಆದರೆ ಈ ಗ್ರಹಗಳೊಂದಿಗೆ ಕೇಂದ್ರ ತ್ರಿಕೋಣಾಧಿಪತಿಗಳೊಂದಿಗೆ ಅಶುಭಗ್ರಹಗಳ ಸಂಬಂಧವಿರಕೂಡದು.

೧೫) ಮಾರಕಗ್ರಹದ ದಶೆಯಲ್ಲಿ ರಾಜಯೋಗದ ಫಲ ಸಿಕ್ಕಂತೆ ಶುಭಫಲವೇ ದೊರೆಯುತ್ತದೆ. ಆದರೆ ಕ್ರಮೇಣ ಅನಿಷ್ಟಗ್ರಹಗಳ ಅಂತರ್ದಶೆಯಲ್ಲಿ ಅಶುಭ ಫಲವುಂಟಾಗುತ್ತದೆ. ಅದರಲ್ಲಿ ಆಯುಷ್ಯಕ್ಕೆ ಗಂಡಾಂತರ ಯೋಗವೂ ಉಂಟು.

(೧೬) ದಶಾನಾಥನು ಪಾಪಗ್ರಹನಿದ್ದರೆ ಅವನೊಡನೆ ಸಂಬಂಧ ವಿರದೇ ಇದ್ದ ಶುಭಗ್ರಹಗಳ ಅಂತರ್ದಶೆಯಲ್ಲಿ ಅಶುಭಫಲವು ಹಾಗೂ ಆ ಗ್ರಹದೊಡನೆ ಸಂಬಂಧ ( ಶುಭ ಸಂಬಂಧ ) ವಿದ್ದ ಶುಭಗ್ರಹದ ಅಂತರ್ದಶೆಯಲ್ಲಿ ಮಿಶ್ರಫಲ ಸಿಗುತ್ತವೆ. ಆದರೆ ಗ್ರಹದೊಡನೆ ಸಂಬಂಧವಿರದಿದ್ದ ಪಾಪಗ್ರಹದ ಅಂತರ್ದಶೆಯಲ್ಲಿ ಬಹಳೇ ಅಶುಭ ಫಲವು ದೊರೆಯುತ್ತದೆ,

(೧೭) ಶನಿಯ ದಶಾದಲ್ಲಿ ಶುಕ್ರನ ಅಂತರ್ದಶೆಯೂ, ಶುಕ್ರನ ದಶಾದೊಳಗೆ ಶನಿಯ ಅಂತರ್ದಶೆಯೂ, ದಶಾನಾಥನಂತೆಯೇ ವಿಶೇಷ ಫಲ ಕೊಡುತ್ತವೆ. ಅಶುಭವಿದ್ದರೆ ಬಹಳೇ ಅಶುಭವು, ಶುಭವಿದ್ದರೆ ಬಹಳೇ ಶುಭ ಫಲಗಳೂ ದೊರೆಯುತ್ತವೆ.

## ಕಾರಕ - ಮಾರಕ ಗ್ರಹಗಳು

ಆಯಾ ಲಗ್ನಗಳಿಗೆ ಶುಭ ಫಲವನ್ನು ಕೊಡುವ ಮುಖ್ಯ ಗ್ರಹಗಳ ಬಗ್ಗೆ ಬೃಹತ್ ಪರಾಶರ ಹೋರೆಯ ಸಾರಜ್ಞನಾದ ನಾರಾಯಣಭಟ್ಟನು ಹೀಗೆ ವಿವೇಚನೆ ಮಾಡಿದ್ದಾನೆ.

**ಮೇಷ—** ಈ ಲಗ್ನಕ್ಕೆ ಮಂಗಳನು ಲಗ್ನಾಧಿಪ ಹಾಗೂ ಮೇಷವು ಮಂಗಳನ ಮೂಲ ತ್ರಿಕೋಣರಾಶಿಯು ಇರುತ್ತದೆ, ೨ನೇ ಹಾಗೂ ೭ನೇ ಸ್ಥಾನಗಳ ಅಧಿಪತಿಯಾದ ಶುಕ್ರನು ಲಗ್ನಾಧಿಪತಿಯ ಶತೃ ಇರುತ್ತಾನೆ. ಹಾಗೂ ಮಾರಕ ಸ್ಥಾನಗಳ ಅಧಿಪನಾದುದರಿಂದ ಅನಿಷ್ಟ ಫಲ

ದಾಯಕನು ಇರುತ್ತಾನೆ. ೩ನೇ ೬ನೇ ಸ್ಥಾನಗಳ ಒಡೆಯನಾದ ಬುಧನು ಈ ಲಗ್ನಕ್ಕೆ ಅನಿಷ್ಟ ಫಲದಾಯಕನು; ಚತುರ್ಥಾಧಿಪನಾದ ಚಂದ್ರನು ಈ ಲಗ್ನಕ್ಕೆ ಶುಭಫಲದಾಯಕನು. ಹಾಗೆಯೆ ಪಂಚಮಾಧಿಪತಿಯಾದ ರವಿಯು ಕೂಡ ಶುಭನು. ಶನಿಯು ಮೂಲತ್ರಿಕೋಣ ರಾಶಿಯಾದ ಕುಂಭ ರಾಶಿಯ ೧೧ನೇ ಸ್ಥಾನದಲ್ಲಿರುವದರಿಂದ ದಶಮಾಧಿಪನಿದ್ದರೂ ಕೂಡ ಅಶುಭನೇ. ಆದುದರಿಂದ ಈ ಲಗ್ನಕ್ಕೆ ರವಿ, ಚಂದ್ರ, ಮಂಗಳ, ಗುರು ಇವರು ಯೋಗಕಾರಕರಾಗುತ್ತಾರೆ. ಆದರೆ ಗುರು ಶನಿ ಇವರ ಯೋಗವು ಒಳ್ಳೆಯದಲ್ಲ.

**ವೃಷಭ** — ಈ ಲಗ್ನಕ್ಕೆ ಶುಕ್ರನು ಲಗ್ನಾಧಿಪನು. ಆದರೆ ಶುಕ್ರನ ಮೂಲ ತ್ರಿಕೋಣವಾದ ತುಲಾರಾಶಿಯು ಷಷ್ಠಮ ಸ್ಥಾನದಲ್ಲಿರುವದರಿಂದ ಶುಕ್ರನು ಮಧ್ಯಮನು, ದ್ವಿತೀಯ ಹಾಗೂ ಪಂಚಮಾಧಿಪತಿಯಾದ ಬುಧ ಈ ಲಗ್ನಕ್ಕೆ ಒಳ್ಳೆಯವನು. ತೃತೀಯ ಸ್ಥಾನದ ಅಧಿಪನಾದ ಚಂದ್ರನು ಅನಿಷ್ಟನು. ಸಪ್ತಮ, ದ್ವಾದಶಗಳ ಅಧಿಪನಾದ ಮಂಗಳನು ( ಮಂಗಳನ ಮೂಲ ತ್ರಿಕೋಣ ರಾಶಿ ದ್ವಾದಶದಲ್ಲಿರುವದರಿಂದ ) ಮಾರಕನು. ಅಷ್ಟಮ ಹಾಗೂ ಏಕಾದಶ ಸ್ಥಾನ ಹಾಗೂ ಅವನ ಮೂಲ ತ್ರಿಕೋಣವಾದ ಧನು ರಾಶಿಯು ಅಷ್ಟಮದಲ್ಲಿದೆ, ಆದುದರಿಂದ ಈ ಲಗ್ನಕ್ಕೆ ಗುರು ಅಶುಭನು. ಆದರೆ ಈ ಲಗ್ನಕ್ಕೆ ಶನಿಯು ಯೋಗಕಾರಕನು.

**ಮಿಥುನ** — ಈ ಲಗ್ನಕ್ಕೆ ೧ ಹಾಗೂ ೪ನೇ ಸ್ಥಾನಗಳ ಅಧಿಪನಾದ ಬುಧನು ಶುಭನು. ಲಗ್ನಾಧಿಪನಾದುದರಿಂದ ಅವನಿಗೆ ಕೇಂದ್ರಾಧಿಪತ್ಯ ದೋಷವಿಲ್ಲ. ಬೇರೆ ಗ್ರಹಗಳ ಅನಿಷ್ಟ ಸಂಬಂಧ ಬರದಿದ್ದಲ್ಲಿ ಮಾತ್ರ ಚಂದ್ರನು ಈ ಲಗ್ನಕ್ಕೆ ಶುಭನು. ೩ನೇ ಸ್ಥಾನಧ ಒಡೆಯನಾದ ರವಿಯು ಅಶುಭನು; ಬುಧನ ಮಿತ್ರನು ಹಾಗೂ ಪಂಚಮ ದ್ವಾದಶಗಳ ಒಡೆಯನು ಆದ ಶುಕ್ರನು ಈ ಲಗ್ನಕ್ಕೆ ಒಳ್ಳೆಯವನು ಏಕೆಂದರೆ ಶುಕ್ರನ ಮೂಲ ತ್ರಿಕೋನ ರಾಶಿಯು ಪಂಚಮದಲ್ಲಿದೆ. ೬ನೇ ಹಾಗೂ ೧೧ನೇ ಸ್ಥಾನಗಳ ಒಡೆಯನಾದ ಮಂಗಳನು ಅಶುಭನು. ಸಪ್ತಮ ದಶಮಗಳ ಒಡೆಯನಾದ ಗುರುವು ಕೇಂದ್ರಾಧಿಪತ್ಯ ದೋಷವಿದ್ದ ಮೂಲಕ ಮಧ್ಯಮನು. ಇದಕ್ಕೆ ಕುಂಭ ರಾಶಿಯು ೯ನೇ ಸ್ಥಾನದಲ್ಲಿದ್ದುದರಿಂದ ಶನಿಯು

ಮಧ್ಯಮನು. ಲಗ್ನಕ್ಕೆ ಬುಧ, ಶುಕ್ರರ ಯೋಗವು ತುಂಬಾ ಒಳ್ಳೆಯದು.

**ಕರ್ಕ—** ಈ ಲಗ್ನಕ್ಕೆ ಬುಧನು ಅನಿಷ್ಟದಾಯಕನು; ಶುಕ್ರನು ಶುಭದಾಯಕನು, ಶನಿಯು ಕೂಡ ಮಾರಕ ಸ್ಥಾನದ ಅಧಿಪನಾದುದ ರಿಂದ ಅಶುಭನು; ಈ ಲಗ್ನಕ್ಕೆ ಮಂಗಳನು ಅತಿ ಶುಭಕಾರಿ. ಚಂದ್ರನು ಲಗ್ನಾಧಿಪತಿಯಾದುದರಿಂದ ಒಳ್ಳೆಯವನು. ಗುರುವಿನ ಮೂಲ ತ್ರಿಕೋಣ ರಾಶಿಯು ಷಷ್ಠದಲ್ಲಿದೆ; ಆದುದರಿಂದ ಮಧ್ಯಮ ಫಲದಾಯಕನು. ಆದರೆ ಗುರು-ಮಂಗಳರ ಯೋಗವು ಈ ಲಗ್ನಕ್ಕೆ ಒಳ್ಳೆಯದು. ದ್ವಿತೀ-ಯದ ಅಧಿಪನಾದ ರವಿಯು ಲಗ್ನಾಧಿಪನ ಮಿತ್ರನು. ಅವನು ಕೂಡಾ ಮಧ್ಯಮನು.

**ಸಿಂಹ—** ಈ ಲಗ್ನಕ್ಕೆ ಕೂಡ ಬುಧ-ಶುಕ್ರರು ಅನಿಷ್ಟ ಫಲದಾ ಯಕರು. ಶನಿಯ ಮೂಲತ್ರಿಕೋಣ ರಾಶಿಯು ಕೇಂದ್ರದಲ್ಲಿ ಅಂದರೆ ೭ನೇ ಸ್ಥಾನದಲ್ಲಿದೆ. ಆದರೆ ಅವನು ಲಗ್ನಾಧಿಪನ ಶತೃ. ಆದುದರಿಂದ ಅವನು ಕೂಡ ಯೋಗಕಾರಕನಲ್ಲ. ಮಂಗಳನು ವಿಶೇಷ ಫಲದಾಯ ಕನು. ಗುರುವಿನ ಮೂಲ ತ್ರಿಕೋಣ ರಾಶಿಯು ಪಂಚಮದಲ್ಲಿದ್ದುದರಿಂದ ಅವನು ಕೂಡ ಶುಭ ಫಲದಾಯಕನು. ಗುರು-ಮಂಗಳರ ಯೋಗವು ಒಳ್ಳೆಯದು. ಶುಕ್ರ - ಮಂಗಳರ ಯೋಗವು ಒಳ್ಳೆಯುದಲ್ಲ.

**ಕನ್ಯಾ—** ಗುರು, ಚಂದ್ರ, ಮಂಗಳರು ಈ ಲಗ್ನಕ್ಕೆ ಅಶುಭ ಫಲ ದಾಯಕರು, ಬುಧ - ಶುಕ್ರರು ಒಳ್ಳೆಯವರು. ಗುರುವಿನ ಯೋಗವು ಕೂಡ ಒಳ್ಳೆಯದು. ಶನಿಯು ಮೂಲತ್ರಿಕೋಣ ಷಷ್ಠದಲ್ಲಿದೆ. ಆದರೆ ಅವನು ಲಗ್ನಾಧಿಪನ ಮಿತ್ರನು. ಆದುದರಿಂದ ಮಧ್ಯಮ ಫಲದಾಯಕನು. ರವಿಯು ಕೂಡ ಮಧ್ಯಮ ಫಲದಾಯಕನು.

**ತುಲಾ—** ಈ ಲಗ್ನಕ್ಕೆ ಗುರು, ರವಿ, ಮಂಗಳ ಇವರು ಅಶುಭ ಫಲ ದಾಯಕರು. ಈ ಲಗ್ನಕ್ಕೆ ಶನಿಯು ತುಂಬಾ ಫಲದಾಯಕನು (ಶುಭನು) ಬುಧನು ಲಗ್ನಾಧಿಪನ ಮಿತ್ರನೂ, ೯ನೇ, ೧೧ನೇ ಸ್ಥಾನಗಳ ಅಧಿಪನೂ ಆದುದರಿಂದ ಒಳ್ಳೆಯವನು. ಬುಧನು ಒಳ್ಳೆಯ ಯೋಗವಾದರೆ ಮಾತ್ರ ಚಂದ್ರನು ಶುಭಕಾರಿ.

**ವೃಶ್ಚಿಕ —** ಈ ಲಗ್ನಕ್ಕೆ ಬುಧ-ಶುಕ್ರರು ಅನಿಷ್ಟ ಫಲದಾಯಕರು.

ಮಂಗಳನು ಮಧ್ಯಮ ಫಲದಾಯಕನು. ( ಮೂಲತ್ರಿಕೋನ ಷಷ್ಠದಲ್ಲಿರುವವನಿಂದ) ಶನಿಯು ಮೂಲತ್ರಿಕೋಣ ರಾಶಿಯು ಚತುರ್ಥದಲ್ಲಿದೆ. ಅಲ್ಲದೆ ಅವನು ತೃತೀಯಾಧಿಪನು. ಆದುದರಿಂದ ಮಧ್ಯಮನು. ಗುರುರವಿಚಂದ್ರರು ಯೋಗಕಾರಕರು. ರವಿ ಚಂದ್ರರ ಯೋಗವು ಶುಭ ಫಲದಾಯಕವು.

**ಧನು:** — ಗುರುವು ಲಗ್ನಾಧಿಪನೂ ಚತುರ್ಥಾಧಿಪನೂ ಆದುದರಿಂದ ಒಳ್ಳೆಯವನು. ಶನಿ ಶುಕ್ರರು ಅನಿಷ್ಟ ಫಲದಾಯಕರು. ಬುಧನಿಗೆ ಕೇಂದ್ರಾಧಿಪತ್ಯ ದೋಷವಿದೆ. ಆದರೆ ರವಿಯೊಡನೆ ಯೋಗವಾದರೆ ಮಾತ್ರ ಶುಭ ಫಲವನ್ನು ಕೊಡುತ್ತಾನೆ. ರವಿ ೯ನೇ ಸ್ಥಾನದ ಅಧಿಪನಾದುದರಿಂದ ಶುಭನು. ಈ ಲಗ್ನಕ್ಕೆ ಗುರುಮಂಗಳರ ಯೋಗವು ಒಳ್ಳೆಯದು.

**ಮಕರ**— ಈ ಲಗ್ನಕ್ಕೆ ಗುರು, ಮಂಗಳ, ಚಂದ್ರರು ಅನಿಷ್ಟ ಫಲದಾಯಕರು. ಚಂದ್ರನು ಮಾರಕಸ್ಥಾನದ ಅಧಿಪನಾದುದರಿಂದ ಅಶುಭ ಫಲದಾಯಕನು. ಬುಧನ ಮೂಲತ್ರಿಕೋನ ರಾಶಿಯು ನವಮದಲ್ಲಿದ್ದುದರಿಂದ ಅವನು ಷಷ್ಠಾಧಿಪತಿಯಾದಾಗ್ಯೂ ಶುಭಫಲದಾಯಕನು. ಶುಕ್ರನ ಮೂಲ ತ್ರಿಕೋಣ ರಾಶಿಯಾದ ತುಲಾ ರಾಶಿಯು ಕೇಂದ್ರದಲ್ಲಿದೆ. ಆದರೆ ಶುಕ್ರನು ತ್ರಿಕೋನಾಧಿಪತಿಯಾದುದರಿಂದ ಶುಭ ಫಲದಾಯಕನು. ಶನಿ ದ್ವಿತೀಯ ಸ್ಥಾನಾಧೀಶನಾದುದರಿಂದ ಹಾಗು ಲಗ್ನಾಧೀಶನಾದುದರಿಂದ ಮಧ್ಯಮ ಫಲದಾಯಕನು. ಬುಧ-ಶುಕ್ರರ ಯೋಗ ತುಂಬಾ ಒಳ್ಳೆಯದು.

**ಕುಂಭ** — ಈ ಲಗ್ನಕ್ಕೆ ಗುರು ಚಂದ್ರ, ಮಂಗಳರು ಅನಿಷ್ಟ ಫಲದಾಯಕರು. ಶುಕ್ರನು ತ್ರಿಕೋನ ಹಾಗೂ ಕೇಂದ್ರಾಧಿಪತಿ ಇದ್ದಾನೆ. ಅವನು ವಿಶೇಷ ಯೋಗಕಾರಕನು. ಬುಧನು ತ್ರಿಕೋನಾಧಿಪತಿ ಹಾಗೂ ಅಷ್ಟಮಾಧಿಪನಾದುದರಿಂದ ಮಧ್ಯಮ ಫಲದಾಯಕನು. ಸಪ್ತಮಾಧೀಶ ರವಿಯು ಶುಭಫಲದಾಯಕನು. ಶನಿಯು ಶುಭಫಲದಾಯಕನು. ಶುಕ್ರ ಮಂಗಳರ ಯೋಗವು ಶುಭಫಲದಾಯಕವು.

**ಮೀನ**— ರವಿ, ಶನಿ, ಶುಕ್ರರು ಅಶುಭಕಾರಕರು. ಗುರು, ಮಂಗಳ, ಚಂದ್ರರು ಶುಭ ಫಲದಾಯಕರು. ಬುಧನು ಮಾರಕೇಶನಾದುದರಿಂದ ಒಳ್ಳೆಯವನು. ಆದರಂತೆ ಗುರು-ಚಂದ್ರರ ಯೋಗವು ಕರ್ಕದಲ್ಲಿ ಆಗುತ್ತಿದ್ದರಂತೂ ಬಹಳೇ ಅನುಕೂಲ.

## ೪. ಸಾಡೇಸಾತಿಯನ್ನು ಹೇಗೆ ನೋಡಬೇಕು ?

ಶನಿಯು ಜನ್ಮರಾಶಿಗೆ ಗೋಚರಿಯಿಂದ ೧೨ನೆಯವನಾಗಿ ಬಂದ ಕೂಡಲೆ ಸಾಡೇಸಾತಿ ಪ್ರಾರಂಭವಾಗುತ್ತದೆ ಎಂಬ ಅಭಿಪ್ರಾಯ ಅಥವಾ ನಂಬಿಗೆ ಎಲ್ಲರಿಗೂ ಅನ್ವಯಿಸುವದಿಲ್ಲ. ಸಾಡೇಸಾತಿಯನ್ನು ತಿಳಿಯಬೇಕಾದರೆ ಜನ್ಮತಃ ಚಂದ್ರನನ್ನು ಮೊದಲು ಪರಿಶೀಲಿಸಬೇಕು. ಚಂದ್ರನು ಆ ರಾಶಿಯಲ್ಲಿ ಎಷ್ಟು ಅಂಶ ಇದ್ದಾನೆಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಬರಿಯ ರಾಶಿಯಿಂದ ಸಾಡೇಸಾತಿ ಎಂದು ಗ್ರಹಿಸಿದರೆ ಶಾಸ್ತ್ರೋಕ್ತವಾಗುವದಿಲ್ಲ. ಹಾಗೂ ಯೋಗ್ಯ ಪರಿಣಾಮವೂ ಕಂಡುಬರಲಾರದು.. ಅದಲ್ಲದೆ ೧೨ನೆಯ ಶನಿ ಇದ್ದಾನೆಂದು ನಾವು ತಿಳಿದಾಗ ೧೧ನೆಯ ಶನಿಯಂತೆಯೂ, ೧೧ನೆಯ ಶನಿಯಿದ್ದಾನೆಂದು ತಿಳಿದಾಗ ೧೨ನೆಯ ಶನಿಯಂತೆಯೂ ಕಾಣುವವು. ಇವಕ್ಕೆಲ್ಲ ಕಾರಣ, ನಾವು ಕೇವಲ ರಾಶಿಗಳಿಂದ ನೋಡುವ ದಾಗಿದೆ.

ಉದಾ:—ವೃಶ್ಚಿಕ ರಾಶಿ ತೆಗೆದುಕೊಳ್ಳಿರಿ. ವಿಶಾಖಾ ನಕ್ಷತ್ರದ ೪ನೆಯ ಚರಣ, ಅನುರಾಧಾದ ನಾಲ್ಕೂ ಚರಣ, ಜ್ಯೇಷ್ಠಾ ನಕ್ಷತ್ರದ ನಾಲ್ಕೂ ಚರಣ ಹೀಗೆ ೯ ಚರಣಗಳು ಕೂಡಿ ವೃಶ್ಚಿಕ ರಾಶಿಯಾಗಿದೆ. ಯಾವನೊಬ್ಬ ವ್ಯಕ್ತಿಯ ಜನನ ಜ್ಯೇಷ್ಠಾ ನಕ್ಷತ್ರದ ಮೊದಲನೆಯ ಚರಣದಲ್ಲಿ ಆಗಿದೆ ಎಂದು ತಿಳಿದರೆ ಚಂದ್ರನು ವೃಶ್ಚಿಕದಲ್ಲಿ ೨೦ ಅಂಶವಿದ್ದಂತಾಯಿತು. ಗೋಚರಿಯಿಂದ ಶನಿಯು ತುಲಾ ರಾಶಿಗೆ ಬಂದಾಗ ವೃಶ್ಚಿಕ ರಾಶಿಯವರಿಗೆ ೧೨ನೆಯ ಶನಿ ಆಗುತ್ತದೆ. ಆದರೆ ಈ ೧೨ನೆಯ ಶನಿಯ ವೃಶ್ಚಿಕ ರಾಶಿಯ ಎಲ್ಲ ನಕ್ಷತ್ರದವರಿಗೂ ಅನ್ವಯಿಸುವದಿಲ್ಲ, ಅಥವಾ ಅಂಶಾತ್ಮಕವಾದ ಸಾಡೇಸಾತಿ ಆರಂಭವಾಗುವದಿಲ್ಲ. ಪ್ರಸ್ತುತ ಜ್ಯೇಷ್ಠಾ ನಕ್ಷತ್ರದ ಮೊದಲನೆಯ ಚರಣದವರಿಗೆ ಗೋಚರಿಯಿಂದ ಶನಿಯು ತುಲಾರಾಶಿಯಲ್ಲಿ ೨೦ ಅಂಶ ಬರುವವರೆಗೂ ಸಾಡೇಸಾತಿಯಾಗುವದಿಲ್ಲ. ತುಲಾರಾಶಿಯಲ್ಲಿ ೨೦ ಅಂಶ ಬರುವವರೆಗೂ ವನು ೧೨ನೆಯ ಶನಿಯಂತೆ ಅಶುಭನಾಗದೆ ೧೧ನೇ ಶನಿಯಂತೆ ಶುಭಫಲ

ವನ್ನು ಕೊಡುತ್ತಾನೆ. ತುಲಾರಾಶಿಯಲ್ಲಿ ೨೧ ಅಂಶದಿಂದ ವೃಶ್ಚಿಕರಾಶಿಯ ೨೦ ಅಂಶ ಬರುವವರೆಗೆ ಅವನು ೧೨ನೆಯವನಂತೆಯೂ ವೃಶ್ಚಿಕರಾಶಿಯ ೨೧ ಅಂಶದಿಂದ ಧನುರಾಶಿಯ ೨೦ ಅಂಶದ ವರೆಗೆ ಜನ್ಮಸ್ಥನಾಗಿಯೂ (೧ ನೆಯವನಾಗಿಯೂ), ಧನುರಾಶಿಯ ೨೧ ಅಂಶದಿಂದ ಮಕರರಾಶಿಯಲ್ಲಿಯ ೨೦ ಅಂಶದ ವರೆಗೆ ಎರಡನೆಯವನಾಗಿಯೂ ಇರುತ್ತಾನೆ. ಅದರಿಂದ ಯಾವದೊಂದು ರಾಶಿಯ ಎಲ್ಲ ಜನರಿಗೂ ಒಂದೇ ಕಾಲಕ್ಕೆ ಸಾಡೇಸಾತಿಯು ಆರಂಭವಾಗುವದಿಲ್ಲ. ಮೊದಲು ಪ್ರತಿಯೊಬ್ಬರ ಸಾಡೇಸಾತಿಯು ಎಂದು ಆರಂಭವಾಗುವದೆಂಬುದನ್ನು ಅರಿತುಕೊಳ್ಳಬೇಕು. ಅಂದರೇನೇ ಶುಭಾಶುಭಗಳ ಪರಿಣಾಮವು ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ ಸಾಡೇಸಾತಿಯನ್ನು ಅಂಶಾತ್ಮಕವಾಗಿ ವಿಚಾರಿಸಬೇಕು. ಆಗ ಮಾತ್ರ ಅದರ ಸೂಕ್ಷ್ಮತೆ ಗೊತ್ತಾಗುತ್ತದೆ.

ಇನ್ನು ಸಾಡೇಸಾತಿಯನ್ನು ತಿಳಿಯುವಾಗ್ಗೆ ವಿಚಾರಿಸತಕ್ಕ ಎರಡನೇ ಮುಖ್ಯ ಸಂಗತಿ ಎಂದರೆ— ಬಹುತರವಾಗಿ ಅನೇಕ ಜನರು ೧೨ನೇ ಶನಿಯು ಬಂದಾಗಲೇ ಸಾಡೇಸಾತಿಯ ಪರಿಣಾಮವಾಗುತ್ತದೆ ಎಂಬ ತಿಳುವಳಿಕೆಯುಳ್ಳವರಾಗಿರುತ್ತಾರೆ. ಆದರೆ ಈ ಗ್ರಹಿಕೆಯು ಕೂಡ ತಪ್ಪು ಕಲ್ಪನೆಯ ಮೂಲಕವಾಗಿರುತ್ತದೆ. ಸಾಡೇಸಾತಿಯ ಪರಿಣಾಮವು ಕೆಲವರಿಗೆ ಆ ಸಮಯದಲ್ಲಿ ಅಂದರೆ ಸಾಡೇಸಾತಿಯ ಅವಧಿಯಲ್ಲಿ ಆಗುವದಿಲ್ಲ. ಇದನ್ನು ನಾವು ಪ್ರತ್ಯಕ್ಷ ಕಾಣುತ್ತೇವೆ. ಅಲ್ಲದೆ ಸಾಡೇಸಾತಿಯು ಏಳೂವರೆ ವರ್ಷಗಳೂ ಕಷ್ಟದಲ್ಲಿಯೇ ಕಳೆಯುತ್ತವೆ ಎಂದೇನೂ ಇಲ್ಲ. ಕೆಲವರಿಗೆ ೨॥ವರ್ಷಗಳು ಮತ್ತೆ ಕೆಲವರಿಗೆ ೫ ವರ್ಷ ಮಾತ್ರ ಕಷ್ಟದಲ್ಲಿ ಕಳೆಯುತ್ತವೆ. ಇದೆಲ್ಲ ಅವರವರ ಕುಂಡಲಿಗಳ ಮೇಲಿಂದ ಮಾತ್ರ ಹೇಳಬಹುದು.

ಗೋಚರಿಯಿಂದ ಶನಿಯು ೪ನೆಯವನು, ೫ನೆಯವನು ಹಾಗೂ ಎಂಟನೆ ಸ್ಥಾನದಲ್ಲಿ ( ಇಲ್ಲಿ ಕೂಡಾ ಅಂಶಾತ್ಮಕವಾಗಿ ವಿಚಾರಿಸಬೇಕು ) ಬಂದಾಗ ಕೂಡ ಸಾಡೇಸಾತಿಯ ಶನಿಯಂತೆಯೇ ಫಲವನ್ನು ಕೊಡುತ್ತಾನೆ. ಸಾಡೇಸಾತಿಯ ಪರಿಣಾಮವಾಗದಿರುವವರಿಗೆ ಈ ವೇಳೆಗೆ ಅಂತರ ಶನಿಯು

ಚತುರ್ಥ, ಪಂಚಮ, ಅಷ್ಟಮನಾದಿ ಬಂದಾಗ್ಗೆ ಸಾಡೇಸಾತಿಯ ಫಲವು ದೊರೆಯುತ್ತದೆ. ಹೀಗೆ ಸಾಡೇಸಾತಿಯೆಂದರೆ ಕೇವಲ ೧೨ನೇ, ೧ನೇ ಹಾಗೂ ೨ನೇ ಶನಿಯೆಂದು ಗ್ರಹಿಸಬಾರದು. ಹಾಗೂ ಉಕ್ತ ಸಾಡೇಸಾತಿ ಯಲ್ಲಿ ಪರಿಣಾಮವಾಗದಿರುವವರಿಗೆ ಚತುರ್ಥ ಪಂಚಮ,ಅಷ್ಟಮ ಶನಿಯು ಬಂದಾಗ್ಗೆ ಪರಿಣಾಮಕಾರಿಯಾಗುತ್ತಾನೆಂದು ಲಕ್ಷ್ಯದಲ್ಲಿಡಬೇಕು. ಕೆಲವರಿಗೆ ಸಾಡೇಸಾತಿಯಲ್ಲಿ ( ಎರಡು ಪ್ರಕಾರದ ಸಾಡೇಸಾತಿಯಲ್ಲಿ ) ಕೂಡ ಶುಭ ಪರಿಣಾಮಗಳೇ ದೊರೆಯಬಹುದು. ಇಂಥ ಜನರ ಕುಂಡಲಿಗಳು ಹೇಗಿರು ತ್ತವೆ; ಹಾಗೂ ಯಾರಿಗೆ ಸಾಡೇಸಾತಿಯು ಮಾರಕವಾಗುತ್ತದೆ ಎಂಬುದನ್ನು ಮುಂದಿನ ಪ್ರಕರಣದಲ್ಲಿ ವಿವರಿಸಲಾಗಿದೆ.

ಇನ್ನು ಸಾಡೇಸಾತಿಯನ್ನು ನೋಡುವಾಗ್ಗೆ ಲಕ್ಷ್ಯದಲ್ಲಿಡಬೇಕಾದ ಮೂರನೇ ಸಂಗತಿ ಎಂದರೆ ಕೆಲವರಿಗೆ ಸಾಡೇಸಾತಿ ಇರದಿದ್ದರೂ ಅಂದರೆ ಗೋಚರಿಯಿಂದ ಶನಿಯು ೩-೬-೯-೧೦-೧೧ ನೆಯವನಾಗಿದ್ದರೂ ಕೂಡ ಸಾಡೇಸಾತಿಯಂತೆಯೇ ಫಲವನ್ನು ಕೊಡುತ್ತಾನೆ. ಇದಕ್ಕೆ ಕಾರಣವೇನು? ಇಲ್ಲಿ ಶನಿಯ ಪರಿಭ್ರಮಣವನ್ನು ನೋಡಬೇಕು. ಶನಿಯ ಪರಿಭ್ರಮಣವು ಮೂಲ ಕುಂಡಲಿಯ ರವಿ ಇಲ್ಲವೆ ಮಂಗಳನ ಮೇಲಿಂದ ಆಗುತ್ತಿದ್ದಾಗ ಶನಿಯು ೧೧ನೆಯವನಿದ್ದಾಗ್ಯೂ ಕೂಡ ಅಶುಭ ಫಲ ಕೊಡುತ್ತಾನೆ. ಅಲ್ಲದೆ ಶನಿಯು ( ಗೋಚರಿ ಶನಿಯು ) ಮೂಲ ರವಿ ಇಲ್ಲವೆ ಮಂಗಳ ರೊಂದಿಗೆ ಸಮಸಪ್ತಕ ಯೋಗ ಮಾಡುತ್ತಿದ್ದರೂ ಮೇಲೆ ಹೇಳಿದ ಅಶುಭ ಫಲವನ್ನೇ ಕೊಡುತ್ತಾನೆ. ಉದಾಹರಣೆಗಾಗಿ– ಒಂದು ಕುಂಡಲಿಯನ್ನು ನಿರೀಕ್ಷಿಸುವಾ. ಮಿಥುನ ರಾಶಿಯುಳ್ಳ ಹಾಗೂ ಕನ್ಯಾಲಗ್ನವುಳ್ಳ ಒಂದು ಜಾತಕವಿದೆ ಎಂದು ತಿಳಿಯಿರಿ. ಹಾಗೂ ಈ ಜಾತಕದಲ್ಲಿ ರವಿಯು ಸಿಂಹ ರಾಶಿಯಲ್ಲಿದ್ದಾನೆಂದು ತಿಳಿಯಿರಿ. ಶನಿಯ ಪರಿಭ್ರಮಣವು ಸಿಂಹ ರಾಶಿಯ ಮೇಲಿಂದ ಆಗುವಾಗ್ಗೆ ಜಾತಕನಿಗೆ ೩ನೇ ಶನಿಯು ಇರುತ್ತಾನೆ ( ಅಂದರೆ ಸಾಡೇಸಾತಿ ಇರುವದಿಲ್ಲ ). ಆದರೆ ರವಿಯ ಮೇಲಿಂದ ಹಾಗೂ ದ್ವಾದಶ ಸ್ಥಾನದ ಮೇಲಿಂದ ಆಗುವ ಶನಿಯ ಪರಿಭ್ರಮಣವು ಸಾಡೇಸಾತಿಯಂತೆಯೆ ಪರಿಣಾಮವನ್ನು ಬೀರುತ್ತದೆ. ಆದರೆ ಈ ಪರಿಣಾಮದ ಅವಧಿ ೨॥ ವರ್ಷ ಇರುತ್ತದೆ. ( ಈ ೨॥ವರ್ಷವಿದ್ದರೂ ಅನೇಕ ಬಗೆಯ ಅಶುಭದಾಯಕ ಫಲವನ್ನು ಕೊಡುತ್ತಾನೆ. )

ಹೀಗೆ ಸಾಡೇಸಾತಿಯು ಬಗ್ಗೆ ಮೇಲೆ ಹೇಳಿದ ಮೂರೂ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಹಾಗೂ ಸಾಡೇಸಾತಿಗಳನ್ನು ಮೇಲೆ ವಿವರಿಸಿದ ಮೂರೂ ರೀತಿಯಿಂದಲೇ ನೋಡಬೇಕಾಗುವುದು.

## ಅನುಕೂಲ ಹಾಗೂ ಪ್ರತಿಕೂಲ ಸಾಡೇಸಾತಿ

ಅನುಕೂಲ ಸಾಡೇಸಾತಿಯೂ ಉಂಟು ಎಂದು ಹೇಳಿದರೆ ಎಷ್ಟೋ ಜನರಿಗೆ ಆಶ್ಚರ್ಯವಾಗುತ್ತದೆ. ಕೆಲವೊಂದು ಸಮಯಕ್ಕೆ ಶನಿಯು ೧೨ನೇ, ೧ನೇ, ೨ನೆಯವನಿದ್ದರೂ ಶುಭ ಫಲವನ್ನು ಕೊಡ ಅನುಭವಿಗಳಿಗೆ ಇದು ಆಶ್ಚರ್ಯದ ಸಂಗತಿಯಲ್ಲ. ಅಂದರೆ ಸಾಡೇಸಾತಿಯು ೭॥ ವರ್ಷಗಳೂ ಅಶುಭವಾಗದೆ ಕೆಲವೊಂದು ವರ್ಷಗಳಿಗೆ ಮಾತ್ರ ಸಾಡೇಸಾತಿಯು ಪರಿಣಾಮವಾಗುತ್ತದೆ. ಸಾಡೇಸಾತಿಯು ಅನುಕೂಲವೋ ಪ್ರತಿಕೂಲವೋ ಎಂಬುದನ್ನು ಅರಿಯಬೇಕಾದರೆ ಮೂಲ ಕುಂಡಲಿಯನ್ನು ಅರಿಯಬೇಕು (ನಿರೀಕ್ಷಿಸಬೇಕು) ಹಾಗೂ ಗೋಚರಿಯ ಗ್ರಹಗಳ ಮೂಲ ಗ್ರಹಗಳಲ್ಲಾಗುವ ಯೋಗಗಳನ್ನು ಕಂಡುಕೊಳ್ಳಬೇಕು.

ಜಲರಾಶಿಯಲ್ಲಿ ಶನಿಯು ಅಶುಭ ಫಲದಾಯಕನು. ಅಂದರೆ ಶನಿಯ ಪರಿಭ್ರಮಣವು ಕರ್ಕ, ವೃಶ್ಚಿಕ, ಮೀನ ರಾಶಿಗಳಲ್ಲಾಗುತ್ತಿದ್ದರೆ ಅವನು ಅಶುಭದಾಯಕನಾಗುತ್ತಾನೆ. ಅದೇ ಕಾಲಕ್ಕೆ ಸಾಡೇಸಾತಿಯಿದ್ದರಂತೂ ತೀರ ಅಶುಭದಾಯಕನು. ಅಗ್ನಿ ರಾಶಿಗಳಲ್ಲಿನ ಶನಿಯ ಪರಿಭ್ರಮಣವು ಜಲರಾಶಿಗಳಲ್ಲಿಯ ಶನಿಗಿಂತಲೂ ಹೆಚ್ಚು ಅಶುಭದಾಯಕವು; ಅಂದರೆ ಮೇಷ, ಸಿಂಹ, ಧನು, ಈ ರಾಶಿಗಳ ಮೇಲಿಂದ ಶನಿಯ ಪರಿಭ್ರಮಣವಾಗುತ್ತಿದ್ದರೆ ಶನಿಯು ಅಶುಭ ಫಲದಾಯಕನಾಗುತ್ತಾನೆ. ಅದೇ ಸಮಯಕ್ಕೆ ಸಾಡೇಸಾತಿ ಅಥವಾ ಪಂಚಮ, ಅಷ್ಟಮ, ಶನಿ ಸಹಿತ ಇದ್ದರಂತೂ ಬಹಳೇ ಹಾನಿದಾಯಕನು.

ಆದರೆ ಶನಿಯ ಪರಿಭ್ರಮಣ ಭೂರಾಶಿಗಳ ಮೇಲಿಂದ ಆಗುತ್ತಿದ್ದರೆ ಅವನು ಶುಭಫಲದಾಯಕನಾಗುತ್ತಾನೆ. ಗೋಚರಿಯಿಂದ ಸಾಡೇಸಾತಿಯು

ಯಿದ್ದರೂ ಭೂರಾಶಿಯಲ್ಲಿಯ ಶನಿಯು ಹಾನಿಕಾರಕನಾಗಲಾರನು. ಭೂ ರಾಶಿಗಳೆಂದರೆ ವೃಷಭ, ಕನ್ಯಾ, ಮಕರ ರಾಶಿಗಳು. ಇವುಗಳ ಮೇಲಿಂದ ಶನಿಯ ಪರಿಭ್ರಮಣವು ಶುಭದಾಯಕವು. ಅದರಂತೆ ವಾಯು ರಾಶಿಗಳ ಮೇಲಿಂದಾಗುವ ಶನಿಯ ಪರಿಭ್ರಮಣವು ಭೂರಾಶಿಗಳಿಗಿಂತ ಹೆಚ್ಚು ಶುಭ-ದಾಯಕವು. ವಾಯು ರಾಶಿಗಳೆಂದರೆ ಮಿಥುನ, ತುಲಾ, ಕುಂಭ ರಾಶಿಗಳು. ಗೋಚರಿಯಿಂದ ಸಾಡೇಸಾತಿ ಇದ್ದರೂ ಕೂಡ ಶನಿಯ ಪರಿಭ್ರಮಣವು ಈ ರಾಶಿಗಳ ಮೇಲಿಂದ ಆಗುತ್ತಿದ್ದರೆ ಅದರ ಪರಿಣಾಮವಾಗಲಾರದು. ಅದ-ಕ್ಕಾಗಿಯೇ ಭೂ ಹಾಗೂ ವಾಯು ರಾಶಿಗಳ ಮೇಲಿಂದ ಭ್ರಮಿಸುವಾಗ ಬಂದ ಸಾಡೇಸಾತಿಯು ಮಾರಕವಾಗದೆ ಪೋಷಕವಾಗುತ್ತದೆ.

ಗೋಚರಿಯ ಶನಿಯ ಪರಿಭ್ರಮಣವು ಈ ರಾಶಿಗಳ ಮೇಲಿಂದ ಇಲ್ಲವೆ ಮೂಲ ಶನಿಯ ಮೇಲಿಂದ ಆಗುತ್ತಿದ್ದರೆ ಸಾಡೇಸಾತಿ ಇದ್ದರೂ ಅದರ ಅಶುಭ ಪರಿಣಾಮವಾಗಲಾರದು. ಅಥವಾ ಗುರು, ಶನಿಗಳೊಡನೆ ಯೋಗಮಾಡುತ್ತಿದ್ದರೂ ಅದರ ಪರಿಣಾಮವಾಗಲಾರದು. ಉದಾಹರಣೆಗೆ: ಒಂದು ಕುಂಡಲಿಯನ್ನು ತೆಗೆದುಕೊಳ್ಳಿರಿ. ಧನು ಲಗ್ನ ಹಾಗೂ ತುಲಾ ರಾಶಿ-ಯುಳ್ಳ ಒಂದು ಕುಂಡಲಿಯನ್ನು ತೆಗೆದುಕೊಳ್ಳಿರಿ. ಗೋಚರಿಯ ಶನಿಯು ಕನ್ಯಾರಾಶಿಗೆ ಬಂದಾಗ್ಗೆ ಇವರಿಗೆ ಸಾಡೇಸಾತಿಯು ಪ್ರಾರಂಭವಾಗುತ್ತದೆ. ಆದರೆ ಮೂಲ ಕುಂಡಲಿಯಲ್ಲಿ ಗುರುವು ಕನ್ಯಾರಾಶಿಯಲ್ಲಿ ಇದ್ದರೆ ಇವರಿಗೆ ಸಾಡೇಸಾತಿಯ ಮೊದಲನೇ ೨॥ ವರ್ಷಗಳು ಅಶುಭಫಲವನ್ನು ಕೊಡುವ-ದಿಲ್ಲ. ( ಇಲ್ಲಿ ಗುರುವಿನ ಹೊರತಾಗಿ ಬೇರೆ ಗ್ರಹಗಳು ಇರಬಾರದು. ) ಹಾಗೆಯೇ ಶನಿಯು ತುಲಾ ರಾಶಿಯಲ್ಲಿ ಪ್ರವೇಶಿಸಿದಾಗ್ಗೆ ಜನ್ಮಸ್ಥಾನನಾಗು ತ್ತಾನೆ. ಆದರೆ ವಾಯುರಾಶಿಯಲ್ಲಿಯ ಶನಿಯು ಹಾನಿಕಾರಕನಲ್ಲ. ಹಾಗೂ ತುಲಾ ರಾಶಿಯಲ್ಲಿ ಶನಿಯು ಉಚ್ಚನಾಗಿರುತ್ತಾನೆ ಆದುದರಿಂದ ಮಾರಕ-ನಾಗಲಾರನು. ಹಾಗೆಯೇ ಶನಿಯು ವೃಶ್ಚಿಕದಲ್ಲಿ ಬಂದಾಗ್ಗೆ ೨ನೆಯವನಾಗು-ತ್ತಾನೆ ( ಉಕ್ತ ರಾಶಿಯವರಿಗೆ ). ಈಗ ಮಾತ್ರ ಶನಿಯ ಸಾಡೇಸಾತಿಯು ಪರಿಣಾಮವಾಗುತ್ತದೆ. ಏಕೆಂದರೆ ಶನಿಯು ಜಲರಾಶಿಯಲ್ಲಿ ಶುಭದಾಯಕ ನಾಗಲಾರನು, ಹಾಗೂ ಜನ್ಮಲಗ್ನದಿಂದ ಕೂಡ ಶನಿ ೧೨ನೆಯವನಾಗುವದ-

ರಿಂದ ಸಾಡೇಸಾತಿಯ ಪರಿಣಾಮವು ಇಲ್ಲಿ ಕಂಡುಬರುತ್ತದೆ. ಮೂಲ ಕುಂಡಲಿಯಲ್ಲಿಯ ಗುರುವಿನ ದೃಷ್ಟಿಯು ಗೋಚರ ಯಾ ಶನಿಯ ಮೇಲಿದ್ದರೆ ಸಾಡೇಸಾತಿಯ ಪರಿಣಾಮವಾಗಲಾರದು.

ಹೀಗೆ ಭೂ ರಾಶಿಯ ಶನಿಯೂ ವಾಯು ರಾಶಿಗಳಲ್ಲಿಯ ಶನಿಯೂ ಗುರುವಿನ ಮೇಲಿಂದ ಪರಿಭ್ರಮಿಸುವ ಶನಿಯೂ ಹಾಗೂ ಗುರುವಿನ ದೃಷ್ಟಿಗೆ ಒಳಗಾದ ಶನಿಯೂ ಮೂಲ ಶನಿಯ ಮೇಲಿಂದ ಗೋಚರೀ ಶನಿಯ ಪರಿಭ್ರಮಣವೂ ಕೂಡ ಹಾನಿಕಾರಕವಾಗಲಾರದು. ಆದಕ್ಕಾಗಿಯೇ ಇದಕ್ಕೆ ಶುಭ ಸಾಡೇಸಾತಿಯೆಂದು ಕರೆಯುತ್ತಾರೆ.

## ಪ್ರತಿಕೂಲ ಸಾಡೇಸಾತಿ

ಪ್ರತಿಕೂಲ ಸಾಡೇಸಾತಿಯಲ್ಲಿ ಶನಿಯ ಪರಿಭ್ರಮಣವು, ಮೂಲ ರವಿಯ ಮೇಲೆ ಆಗುತ್ತಿದ್ದರೆ ಇದು ಪ್ರತಿಕೂಲ. ಉದಾಹರಣೆಗಾಗಿ : ಕನ್ಯಾಲಗ್ನ ಹಾಗೂ ಕನ್ಯಾರಾಶಿಯು ಕುಂಡಲಿಯಲ್ಲಿ ರವಿಯು ಸಿಂಹದಲ್ಲಿ ಇದ್ದಾನೆ ಎಂದು ತಿಳಿಯಿರಿ. ಉಕ್ತ ರಾಶಿಯವರಿಗೆ ಶನಿಯು ಸಿಂಹದಲ್ಲಿ ಇದ್ದಾಗ್ಗೆ ಸಾಡೇಸಾತಿ ಆಗುತ್ತದೆ. ಆದರಲ್ಲಿ ಸಿಂಹದ ರವಿಯ ಮೇಲಿನ ಶನಿಯ ಪರಿಭ್ರಮಣವಂತೂ ಬಹಳ ಅಶುಭವು. ಮೊದಲನೆಯದಾಗಿ ಅಗ್ನಿ ರಾಶಿಯಲ್ಲಿಯ ಶನಿಯು ಅಶುಭದಾಯಕನು. ಎರಡನೆಯದಾಗಿ ರವಿಯ ಮೇಲಿಂದ ಪರಿಭ್ರಮಿಸುವ ಶನಿಯು ಮಾರಕನು. ಮೂರನೆದಾಗಿ 12ನೇ ಶನಿಯು ಮಾರಕನು. ಹೀಗೆ ಪ್ರತಿಕೂಲ ಸಾಡೇಸಾತಿಯ ಉದಾಹರಣೆ ಇದು.

ಮೂಲ ಮಂಗಳನ ಮೇಲಿಂದ ಶನಿಯ ಭ್ರಮಣವೂ ಕೂಡ ಪ್ರತಿಕೂಲವೇ. ಹಾಗೂ ಇದೇ ಸಮಯಕ್ಕೆ ಸಾಡೇಸಾತಿ ಇದ್ದರೆ ಬಹಳ ಪ್ರತಿಕೂಲ ಸಾಡೇಸಾತಿಯಾಗುವುದು. ರವಿ-ಮಂಗಳರ ಹೊರತಾಗಿ ಶನಿಯ ಪರಿಭ್ರಮಣವು ರಾಹುವಿನ ಮೇಲಿಂದ ಆಗುತ್ತಿದ್ದರೂ ಪ್ರತಿಕೂಲವೇ.

ಉದಾಹರಣೆಗಾಗಿ : ಮೇಲಿನ ಕುಂಡಲಿಯನ್ನೇ ನೋಡುವ. ಇಲ್ಲಿ ಕನ್ಯಾರಾಶಿಯಲ್ಲಿ ಮಂಗಳ ಹಾಗೂ ತುಲಾ ರಾಶಿಯಲ್ಲಿ ರಾಹು ಇದ್ದಾನೆಂದು ತಿಳಿಯಿರಿ. ಶನಿಯ ಪರಿಭ್ರಮಣವು ಸಿಂಹ ರಾಶಿಯ ಮೇಲಿಂದ ಹಾಗೂ ರವಿಯ ಮೇಲಿಂದ ಮತ್ತೂ ಹನ್ನೆರಡನೆಯ ಸ್ಥಾನದ ಮೇಲಿಂದ ಆಗುವದರಿಂದ ಬಹಳೇ ಪ್ರತಿಕೂಲ. ಅದರಂತೆಯೇ ಶನಿಯ ಪರಿಭ್ರಮಣವು ಲಗ್ನದ ಮೇಲಿಂದಲೂ ಮಂಗಳನ ಮೇಲಿಂದಲೂ ಆಗುವದರಿಂದ ಅದು ಕೂಡ ಅಶುಭದಾಯಕವೇ. ಮತ್ತು ಕೊನೆಯದಾಗಿ, 2ನೇ ಸ್ಥಾನದ ಮೇಲಿಂದ ಹಾಗೂ ರಾಹುವಿನ ಮೇಲಿಂದ ಆಗುವ ಶನಿಯ ಪರಿಭ್ರಮಣವೂ ಕೂಡ ಹಾನಿದಾಯಕವು. ಆದರೆ ಇಲ್ಲಿ ಶನಿಯು ಉಚ್ಚನಾಗುವದರಿಂದ ಹಾನಿಯ ಪ್ರಮಾಣವು ಕಡಿಮೆಯಾಗುತ್ತದೆ. ಇದರಂತೆ ಶನಿಯು ರವಿ, ಮಂಗಳ, ರಾಹು ಇವರೊಡನೆ ಸಮಸಪ್ತಕ ಯೋಗ ಮಾಡುತ್ತಿದ್ದರೂ ಅಶುಭ ಫಲದಾಯಕನಾಗುತ್ತಾನೆ, ಅಲ್ಲದೆ ಅಗ್ನಿ ಹಾಗೂ ಜಲರಾಶಿಯಲ್ಲಿ ಶನಿಯ ಪರಿಭ್ರಮಣವು ಸಾಡೇಸಾತಿಯಲ್ಲಿ ಆಗುತ್ತಿದ್ದರೂ ಅಶುಭದಾಯಕವು.



## ೫. ರಾಶಿಗಳ ಮೇಲಿಂದ ಶನಿಯ ಪರಿಭ್ರಮಣ

**ಮೇಷ:—** ಮೇಷ ರಾಶಿಯುಳ್ಳವರಿಗೆ ಶನಿಯು ಮೀನ ರಾಶಿಯಲ್ಲಿ ಬಂದಾಗ್ಗೆ ಸಾಡೇಸಾತಿಯು ಪ್ರಾರಂಭವಾಗುತ್ತದೆ. ಶನಿಯು ೧೨ನೇದವನಾಗುತ್ತಾನೆ. ಅಲ್ಲದೇ ಶನಿಯು ಜಲಚರ ರಾಶಿಯಲ್ಲಿ ಅಶುಭ ಫಲವನ್ನು ಕೊಡುತ್ತಾನೆ. ಆದುದರಿಂದ ಆವನು ಅಶುಭ ಫಲವನ್ನೇ ಕೊಡುತ್ತಾನೆ. ಮುಂದೆ ಮೇಷ ರಾಶಿಯಲ್ಲಿ ಶನಿಯು ಭ್ರಮಿಸುವಾಗಲೂ ಕೂಡ ಜನ್ಮಸ್ಥ ಶನಿಯು ಇರುತ್ತಾನೆ. ಅಲ್ಲದೇ ಅಗ್ನಿ ತತ್ವದ ರಾಶಿಯಾದ ಮೇಷದಲ್ಲಿಯು ಶನಿಯು ಅಶುಭದಾಯಕನು. ಹೀಗೆ ಶನಿಯು ಮೇಷದಲ್ಲಿ ಇರುವವರೆಗೆ ಅಶುಭ ಫಲದಾಯಕನು. ವೃಷಭ ರಾಶಿಯಲ್ಲಿ ಶನಿಯು ಭ್ರಮಿಸುವಾಗ ಎರಡನೇ ಶನಿಯು ಇರುತ್ತಾನೆ. ಶನಿಯು ಎರಡನೇದವನಿದ್ದರೂ ಕೂಡ ಅಂದರೆ ಸಾಡೇಸಾತಿ ಇದ್ದರೂ ಕೂಡ ಅಶುಭ ಫಲವನ್ನು ಕೊಡುವದಿಲ್ಲ. ವೃಷಭ ರಾಶಿಯು ಭೂ ರಾಶಿಯು ಮತ್ತು ಮಿತ್ರ ಗ್ರಹದ ರಾಶಿಯು. ಆದುದರಿಂದ ಇಲ್ಲಿ ಸಾಡೇಸಾತಿಯ ಪರಿಣಾಮವು ಆಗಲಾರದು. ಶನಿಯು ಕರ್ಕದಲ್ಲಿ ಪ್ರವೇಶಿಸಿದಾಗ ೪ನೆದವನಾಗುತ್ತಾನೆ, ಕರ್ಕ ರಾಶಿಯು ಜಲರಾಶಿ ಹಾಗೂ ಚಂದ್ರನ ರಾಶಿಯು. ಆದುದರಿಂದ ಚತುರ್ಥ ಶನಿಯು ಅಶುಭ ಫಲವನ್ನು ಕೊಡುತ್ತಾನೆ. ಅದರಂತೆ ಪಂಚಮ ಶನಿಯು ಅಂದರೆ ಶನಿಯು ಸಿಂಹರಾಶಿಯಲ್ಲಿದ್ದಾಗ ಅಶುಭದಾಯಕನು; ಎಂದರೆ ಪಂಚಮ ಶನಿಯು ಅಶುಭದಾಯಕನು. ಅಗ್ನಿರಾಶಿಯಾದ ಸಿಂಹದಲ್ಲಿ ಅವನು ಕೇವಲ ಅಶುಭ ದಾಯಕನು. ಸಿಂಹರಾಶಿಯು ಶತೃಗ್ರಹದ ರಾಶಿಯಾದುದರಿಂದ ವಿಶೇಷವಾಗಿ ಅಶುಭಕಾರಕನಾಗುತ್ತಾನೆ. ಮುಂದೆ ಶನಿಯು ಅಷ್ಟಮನಾಗಿ ಬರಲು ಅಂದರೆ ವೃಶ್ಚಿಕದಲ್ಲಿ ಶನಿಯು ಭ್ರಮಿಸುವಾಗ ಕೂಡ ಅಶುಭದಾಯಕನಾಗುತ್ತಾನೆ. ಮೊದಲೇ ಅಷ್ಟಮ ಶನಿಯು, ಮೇಲಾಗಿ ಶತೃಕ್ಷೇತ್ರ ಹಾಗೂ ಜಲರಾಶಿಯಲ್ಲಿಯ ಶನಿಯು. ಆದುದರಿಂದ ಅಶುಭದಾಯಕನಾಗುತ್ತಾನೆ.

ಹೀಗೆ ಮೇಷರಾಶಿಯವರಿಗೆ ಶನಿಯು ೧೨-೧-೪-೫-೮ನೇದವನಿದ್ದಾಗ್ಗೆ

ಅಶುಭ ಫಲವನ್ನು ಕೊಡುತ್ತಾನೆ. ಸಾಡೇಸಾತಿ ಇದ್ದರೂ ವೃಷಭದಲ್ಲಿಯ ಶನಿಯು ಅಶುಭ ಫಲವನ್ನು ಕೊಡುವದಿಲ್ಲ.

**ವೃಷಭ** :— ವೃಷಭ ರಾಶಿಯವರಿಗೆ ಶನಿಯು ಮೇಷದಲ್ಲಿ ಬಂದಾಗ್ಗ ಸಾಡೇಸಾತಿಯು ಶುರುವಾಗುತ್ತದೆ. ಶನಿಯು ೧೨ನೇದವನಿದ್ದಾಗ್ಗ ಅಂದರೆ ಮೇಷದಲ್ಲಿರುವವರಿಗೆ ಬಹಳೇ ಅಶುಭ ಫಲವನ್ನು ಕೊಡುತ್ತಾನೆ. ಮೇಷವು ಅಗ್ನಿ ರಾಶಿಯು, ಶನಿಯ ಶತ್ರುವಿನ ರಾಶಿಯು, ಮತ್ತು ಮೇಷದಲ್ಲಿಯ ಶನಿಯು ನೀಚನಾಗುತ್ತಾನೆ. ಹೀಗೆ ಶನಿಯು ಬಹಳೇ ಅಶುಭದಾಯಕನಾಗುತ್ತಾನೆ. ಸಾಡೇಸಾತಿಯ ಈ ೨॥ ವರ್ಷಗಳು ಕಷ್ಟಮಯವಾಗಿರುತ್ತವೆ. ವೃಷಭದಲ್ಲಿ ಶನಿಯು ಬಂದಾಗ್ಗ ಅಂದರೆ ಜನ್ಮಸ್ಥ ಶನಿಯು ಇದ್ದರೂ ಕೂಡ ಅಶುಭ ಫಲ ಕೊಡುವದಿಲ್ಲ. ವೃಷಭವು ಭೂರಾಶಿ ಹಾಗೂ ಮಿತ್ರಗ್ರಹದ ರಾಶಿಯು. ಶನಿಯು ಮಿಥುನದಲ್ಲಿದ್ದಾಗ್ಗ ವೃಷಭ ರಾಶಿಯವರಿಗೆ ಎರಡನೇ ಶನಿಯು ಇರುತ್ತಾನೆ. ಆದರೂ ಕೂಡ ಶನಿಯು ಅಶುಭ ಫಲವನ್ನು ಕೊಡುವದಿಲ್ಲ. ಮಿಥುನ ರಾಶಿಯು ವಾಯು ತತ್ವದ ರಾಶಿಯು, ಹಾಗೂ ಮಿತ್ರಗ್ರಹದ ರಾಶಿಯು. ಆದುದರಿಂದ ಶನಿಯು ಅಶುಭನಾಗುವದಿಲ್ಲ. ಹೀಗೆ ವೃಷಭ ರಾಶಿಯವರಿಗೆ ಸಾಡೇಸಾತಿಯು ಕೇವಲ ಮೊದಲಿನ ೨॥ ವರ್ಷಗಳವರೆಗೆ ಮಾತ್ರ ಇರುತ್ತದೆ, ಉಳಿದ ಐದು ವರ್ಷಗಳು ಶುಭದಾಯಕ. ಶನಿಯು ಕರ್ಕರಾಶಿಯಲ್ಲಿ ಪ್ರವೇಶಿಸಿದಾಗ್ಗ ೩ನೇ ಶನಿಯು (ಶುಭ) ಇದ್ದರೂ ಕೂಡ ಮಧ್ಯಮ ಫಲವನ್ನು ಕೊಡುತ್ತಾನೆ. ಸಿಂಹರಾಶಿಸ್ಥ ಶನಿಯು, ವೃಷಭ ರಾಶಿಯವರಿಗೆ ಬಹಳೇ ಅಶುಭ ಫಲವನ್ನು (ಸಾಡೇಸಾತಿಯ ಫಲದಂತೆಯೇ) ಕೊಡುತ್ತಾನೆ. ಇಲ್ಲಿ ಶನಿಯು ಅಗ್ನಿತತ್ವದ ರಾಶಿ ಹಾಗೂ ಶತ್ರುಗ್ರಹದ ರಾಶಿಯಲ್ಲಿ, ಮತ್ತು ಚತುರ್ಥ ಶನಿಯು ಆದ ಕಾರಣ ಮೇಲ್ಕಾಣಿಸಿದ ಫಲವು ದೊರೆಯುತ್ತದೆ. ಕನ್ಯಾರಾಶಿಯಲ್ಲಿಯ ಶನಿಯು ಪಂಚಮ ಶನಿಯಾಗಿದ್ದರೂ ಅಶುಭನಾಗುವದಿಲ್ಲ. ಮುಂದೆ ಶನಿಯು ವೃಶ್ಚಿಕ ಹಾಗೂ ಧನುರಾಶಿಗಳಲ್ಲಿದ್ದಾಗ್ಗ ೭-೮ನೇದವನಾಗುತ್ತಾನೆ. ವೃಶ್ಚಿಕ ರಾಶಿಯಲ್ಲಿಯ ಶನಿಯು ಅಶುಭನು. ಆದರೆ ಅವನು ೭ನೇದವನಾಗುವದರಿಂದ ಅಶುಭತ್ವವು ಸ್ವಲ್ಪ ಕಡಿಮೆಯಾಗುತ್ತದೆ. ಧನುರಾಶಿಸ್ಥ ಅಷ್ಟಮ ಶನಿಯು ಬಹಳೇ ಹಾನಿಕಾರಕನು. ಧನುರಾಶಿಯು ಅಗ್ನಿ

ತತ್ವದ ರಾಶಿಯಿದ್ದು ಅಲ್ಲಿ ಅಷ್ಟಮ ಶನಿ ಆಗುವದರಿಂದ ಅಶುಭ ಫಲವನ್ನು ಕೊಡುತ್ತಾನೆ.

ಹೀಗೆ ವೃಷಭ ರಾಶಿಯವರಿಗೆ ೧೨-೩-೪-೮ನೇ ಶನಿಯು ಬಹಳೇ ಅಶುಭನು, ಅಂದರೆ ಸಾಡೇಸಾತಿಯ ತೆಯ ಫಲವನ್ನು ಕೊಡುವನು. ೭ನೇ ಶನಿಯು ಕೂಡ ಅಶುಭ ಫಲವನ್ನು ಕೊಡುತ್ತಾನೆ.

**ಮಿಥುನ :** ಮಿಥುನ ರಾಶಿಯವರಿಗೆ ಶನಿಯು ವೃಷಭದಲ್ಲಿ ಬಂದಾಗ್ಗ ಸಾಡೇಸಾತಿಯು ಪ್ರಾರಂಭವಾಗುತ್ತದೆ. ಅಂದರೆ ಶನಿಯು ವೃಷಭ ತಾಗೂ ಮಿಥುನಗಳಲ್ಲಿರುವವರೆಗೆ ಅಂದರೆ ೧೨-೧ನೇದವನಿದ್ದರೂ ಕೂಡಾ ಅಶುಭ ಫಲವನ್ನು ಕೊಡುವದಿಲ್ಲ. ಶನಿಯು ಕರ್ಕದಲ್ಲಿದ್ದಾಗ್ಗ ಎರಡನೇಯವನಾಗುತ್ತಾನೆ. ಈಗ ಮಾತ್ರ ಶನಿಯು ಸಾಡೇಸಾತಿಯ ಫಲವು ದೊರೆಯುತ್ತದೆ. ಹೀಗೆ ಮಿಥುನ ರಾಶಿಯವರಿಗೆ ಸಾಡೇಸಾತಿಯು ಕೊನೆಯ ೨½ ವರ್ಷಗಳಲ್ಲಿ ಮಾತ್ರ ಅಶುಭ ಫಲಗಳು ದೊರೆಯುತ್ತವೆ. ಸಿಂಹಸ್ಥ ಶನಿಯು ೩ನೇದವನಿದ್ದರೂ ಕೂಡ ಶುಭ ಫಲವನ್ನು ಕೊಡುವದಿಲ್ಲ. ಕನ್ಯಾ ರಾಶಿಯ ಶನಿಯು ೪ನೇದವನಾದರೂ ಅಶುಭನಾಗುವದಿಲ್ಲ. ಅದರಂತೆಯೆ ತುಲಾ ರಾಶಿಯಲ್ಲಿದ್ದ ಶನಿಯು ಪಂಚಮನಾದರೂ ಕೂಡ ಅಶುಭನಾಗದೇ ಶುಭ ಫಲವನ್ನೇ ಕೊಡುತ್ತಾನೆ. ೬ನೇ ಹಾಗೂ ೭ನೇ ಶನಿಯು ಶುಭನಿದ್ದರೂ ವೃಶ್ಚಿಕ ಹಾಗೂ ಧನು ರಾಶಿಗಳಲ್ಲಿದ್ದ ಮೂಲಕ ಶುಭಕಾರಕನಾಗುವದಿಲ್ಲ. ಶನಿಯು ಮೇಷದಲ್ಲಿದ್ದಾಗ್ಗ ಮಿಥುನ ರಾಶಿಯವರಿಗೆ ೧೧ನೇದವನಾಗುತ್ತಾನೆ. ಆದರೆ ಇಲ್ಲಿ ೧೧ನೇ ಶನಿಯು ಶುಭಫಲಗಳು ದೊರೆಯದ ಅಗ್ನಿತತ್ವದ ರಾಶಿಯಲ್ಲಿಯು, ಶತ್ರು ಕ್ಷೇತ್ರದಲ್ಲಿದ್ದ, ನೀಚ ಸ್ಥಾನದಲ್ಲಿದ್ದ ಕಾರಣ ಸಾಡೇಸಾತಿಯ ಫಲದಂತೆ ಅಶುಭ ಫಲಗಳು ದೊರೆಯುತ್ತವೆ.

ಹೀಗೆ ಮಿಥುನ ರಾಶಿಯವರಿಗೆ ೨-೩-೧೧ನೇ ಶನಿಯು ಬಹಳೇ ಅಶುಭನೂ ಹಾಗೂ ೬-೭ನೇ ಶನಿಯು ಅಶುಭನೂ ಇರುತ್ತಾನೆ.

**ಕರ್ಕ :**—ಕರ್ಕ ರಾಶಿಯವರಿಗೆ ಶನಿಯು ಮಿಥುನದಲ್ಲಿ ಬಂದ ಕೂಡಲೇ ಸಾಡೇಸಾತಿಯು ಪ್ರಾರಂಭವಾಗುತ್ತದೆ. ಶನಿಯು ಮಿಥುನದಲ್ಲಿರುವವರೆಗೆ ಫಲವನ್ನು ಕೊಡುವದಿಲ್ಲ. ಕರ್ಕ ಹಾಗೂ ಸಿಂಹ ರಾಶಿಯಲ್ಲಿ ಶನಿಯು ಪರಿ

ಭ್ರಮಿಸುವಾಗ ೧೨ನೇದವನಿರುತ್ತಾನೆ. ಈ ಅವಧಿಯಲ್ಲಿ ಮಾತ್ರ ಶನಿಯು ಸಾಡೇಸಾತಿಯಂತೆ ಫಲವನ್ನು ಕೊಡುತ್ತಾನೆ. ಹೀಗೆ ಕರ್ಕ ರಾಶಿಯವರಿಗೆ ಸಾಡೇಸಾತಿಯ ಫಲವು ಕೇವಲ ೫ ವರ್ಷಗಳವರೆಗೆ ಮಾತ್ರ ದೊರೆಯುತ್ತದೆ. ಮೊದಲಿನ ೨॥ ವರ್ಷಗಳು ಅಶುಭವಾಗಲಾರವು. ತುಲಾರಾಶಿಯಲ್ಲಿರುವಾಗ ಶನಿಯು ೪ನೇದವನಿರುತ್ತಾನೆ. ಆದರೆ ಈ ಅವಧಿಯಲ್ಲಿ ಅವನು ಅಶುಭ ಫಲಗಳನ್ನು ಕೊಡದೆ ಶುಭ ಫಲಗಳನ್ನೇ ಕೊಡುತ್ತಾನೆ. ಮುಂದೆ ವೃಶ್ಚಿಕದಲ್ಲಿ ಶನಿಯು ಪ್ರವೇಶಿಸಿದಾಗ ೫ನೇ ಶನಿಯು ಇರುತ್ತಾನೆ. ಈ ಸಮಯದಲ್ಲಿ ಸಾಡೇಸಾತಿಯಲ್ಲಿಯ ಫಲಗಳಂತೆಯೇ ಫಲಗಳು ದೊರೆಯುತ್ತವೆ. ಅಷ್ಟಮ ಶನಿಯು ಕರ್ಕ ರಾಶಿಯವರಿಗೆ ಅಶುಭವಾಗಲಾರನು. ಏಕೆಂದರೆ ಶನಿಯು ಕುಂಭರಾಶಿಯಲ್ಲಿದ್ದಾಗ ಅಷ್ಟಮನಾಗಿರುತ್ತಾನೆ. ಕುಂಭರಾಶಿಯು ಶನಿಯ ಮೂಲ ತ್ರಿಕೋನ ರಾಶಿಯು. ಆದರೆ ಷಷ್ಠ ಶನಿಯು (ಧನುವಿನಲ್ಲಿಯ ಶನಿಯು) ಶುಭಕಾರಿಯಾಗದೇ ಅಶುಭನಾಗುತ್ತಾನೆ. ದಶಮ ಶನಿಯು ಕರ್ಕರಾಶಿಯವರಿಗೆ ಹಾನಿಕಾರಕನಾಗುತ್ತಾನೆ. ಏಕೆಂದರೆ ಶನಿಯ ಪರಿಭ್ರಮಣವು ಮೇಷ ರಾಶಿಯಲ್ಲಿ ಇರುತ್ತದೆ. ಮೇಷ ರಾಶಿಯೇ ಶನಿಯ ಶತೃಗ್ರಹದ ರಾಶಿಯೂ ಮತ್ತು ಅಗ್ನಿ ತತ್ವದ ರಾಶಿಯೂ ಇದ್ದು ಶನಿಯು ನೀಚ ರಾಶಿಯು ಇರುತ್ತದೆ.

ಹೀಗೆ ಕರ್ಕ ರಾಶಿಯವರಿಗೆ ೨-೩-೫-೧೦ನೇ ಶನಿಯು ಸಾಡೇಸಾತಿಯಂತೆ ಫಲವನ್ನು ಕೊಡುತ್ತಾನೆ. ೬ನೇ ಸನಿಯು ಶುಭ ಫಲ ಕೊಡುವದಿಲ್ಲ.

**ಸಿಂಹ** :—ಸಿಂಹರಾಶಿಯವರಿಗೆ ೧೨-೧ನೇ ಶನಿಯು ಅಂದರೆ ಕರ್ಕ-ಸಿಂಹರಾಶಿಸ್ಥ ಶನಿಯು ಬಹಳೇ ಹಾನಿಕಾರನು. ಅಂದರೆ ಸಾಡೇಸಾತಿಯ ಸಂಪೂರ್ಣ ಫಲವು ಮೊದಲಿನ ಐದು ವರ್ಷಗಳಲ್ಲಿಯೇ ದೊರೆಯುತ್ತದೆ ಎರಡನೇ ಶನಿಯು (ಸಾಡೇಸಾತಿ ಇದ್ದರೂ ಕೂಡ) ಅಶುಭನಾಗುವದಿಲ್ಲ. ಕನ್ಯಾ ರಾಶಿಯಲ್ಲಿ ಶನಿಯು ಇದ್ದಾಗ ಸಿಂಹ ರಾಶಿಯವರಿಗೆ ಎರಡನೇ ಶನಿಯು ಇರುತ್ತಾನೆ. ಕನ್ಯಾರಾಶಿಯು ಭೂತತ್ವರಾಶಿಯು ಹಾಗೂ ಮಿತ್ರಗ್ರಹದ ರಾಶಿಯು ಇದೆ. ಹೀಗೆ ಸಿಂಹ ರಾಶಿಯವರಿಗೆ ಮೊದಲಿನ ಐದು ವರ್ಷ ಬಹಳೇ ತ್ರಾಸು ಹಾಗೂ ಕೊನೆಯ ಎರಡೂವರೆ ವರ್ಷ ಶುಭಫಲ ದೊರೆಯುತ್ತವೆ. ಶನಿಯು ವೃಶ್ಚಿಕದಲ್ಲಿದ್ದಾಗ್ಗ ಸಿಂಹ ರಾಶಿಯವರಿಗೆ ಚತುರ್ಥನಿರುತ್ತಾನೆ ಆದರಿಂತೆಯ

ಧನು ರಾಶಿಯಲ್ಲಿದ್ದಾಗ್ಗ ಪಂಚಮ ಶನಿಯು ಇರುತ್ತಾನೆ. ಉಕ್ತ ಎರಡೂ ರಾಶಿಗಳಲ್ಲಿಯ ಶನಿಯು ಶುಭಕಾರಕನಲ್ಲ. ಮೇಲಾಗಿ ಚತುರ್ಥ ಪಂಚಮ ಶನಿಯು ಶುಭಕಾರಕನಲ್ಲ. ಆದುದರಿಂದ ಚತುರ್ಥ–ಪಂಚಮ ಶನಿಯ ಫಲಗಳೂ,ಸಿಂಹ ರಾಶಿಯವರಿಗೆ ಸಾಡೇಸಾತಿಯ ಫಲದಂತೆಯೇ ದೊರೆಯುತ್ತವೆ. ಶನಿಯು ಮೀನದಲ್ಲಿದ್ದಾಗ್ಗ ಅಷ್ಟಮನಾಗಿರುತ್ತಾನೆ. ಮುಂದೆ ಮೇಷ ನವಮನು, ಈ ಅಷ್ಟಮ ಶನಿಯು ಬಹಳೇ ಹಾನಿಕಾರಕನು.

ಹೀಗೆ ಸಿಂಹ ರಾಶಿಯವರಿಗೆ ೧೨-೧-೪-೫-೮ನೇ ಶನಿಯು ಅಶುಭದಾಯಕನು. ಆದುದರಿಂದ ಸಿಂಹ ರಾಶಿಯವರಿಗೆ ಉಳಿದವರಿಗಿಂತ ಸಾಡೇಸಾತಿಯ ಪರಿಣಾಮ ಹೆಚ್ಚಾಗಿ ಆಗುತ್ತದೆ.

**ಕನ್ಯಾ —** ಕನ್ಯಾ ರಾಶಿಯವರಿಗೆ ಶನಿಯು ಸಿಂಹ ರಾಶಿಯಲ್ಲಿ ಬಂದಾಗ್ಗ ಸಾಡೇಸಾತಿಯು ಪ್ರಾರಂಭವಾಗುತ್ತದೆ. ಆದರೆ ಇವರಿಗೆ ಸಾಡೇಸಾತಿಯ ೭॥ ವರ್ಷಗಳೂ ಅಶುಭ ಇರುವದಿಲ್ಲ. ಮೊದಲಿನ ೨॥ ವರ್ಷಗಳಲ್ಲಿ ಮಾತ್ರ ಕಷ್ಟವು ಉಂಟಾಗುತ್ತದೆ. ಕೊನೆಯ ಐದು ವರ್ಷಗಳಲ್ಲಿ ತೊಂದರೆಗಳು ಬರುವದಿಲ್ಲ. ಏಕೆಂದರೆ ಶನಿಯು ಕನ್ಯಾ, ತುಲಾ ರಾಶಿಗಳಲ್ಲಿ ಅಶುಭವಾಗುವದಿಲ್ಲ. ತುಲಾ ರಾಶಿಯಂತೂ ಶನಿಗೆ ಉಚ್ಚ ರಾಶಿಯು ಹಾಗೂ ಕನ್ಯಾ ರಾಶಿಯು ಈ ಮೊದಲೇ ಹೇಳಿದಂತೆ ಭೂ ತತ್ವದ ಮಿತ್ರ ಗ್ರಹದ ರಾಶಿಯು. ಧನು ರಾಶಿಯಲ್ಲಿದ್ದಾಗ ಚತುರ್ಥನಾಗುವದರಿಂದ ಹಾನಿದಾಯಕನು. ಪಂಚಮ ಶನಿಯು ಅಂದರೆ ಮಕರದಲ್ಲಿಯ ಶನಿಯು ಸ್ವಗೃಹಿ ಇದ್ದ ಮೂಲಕ ಅಶುಭನಾಗುವದಿಲ್ಲ. ಆದರೆ ಶನಿಯು ಮೇಷದಲ್ಲಿದ್ದಾಗ ಅಷ್ಟಮನಾಗುವದರಿಂದ ಬಹಳೇ ಅಶುಭದಾಯಕನು. ಇಲ್ಲಿ ಕೂಡ ಶನಿಯ ಪರಿಣಾಮವು ಸಾಡೇಸಾತಿಯಲ್ಲಿಯ ಶನಿಯ ಪರಿಣಾಮದಂತೆಯೇ ದೊರೆಯುತ್ತದೆ.

**ತುಲಾ:—** ತುಲಾ ರಾಶಿಯವರಿಗೆ ಸಾಡೇಸಾತಿಯು ಕನ್ಯಾರಾಶಿಯಲ್ಲಿ ಶನಿಯು ಬಂದಾಗ್ಗ ಪ್ರಾರಂಭಿಸುತ್ತದೆ. ಆದರೆ ಸಾಡೇಸಾತಿಯಲ್ಲಿಯ ಮೊದಲಿನ ಐದು ವರ್ಷಗಳಲ್ಲಿ ಅಂದರೆ ಶನಿಯು ತುಲಾ ರಾಶಿಯಲ್ಲಿರುವವರೆಗೆ ಶುಭ ಫಲಗಳೇ ದೊರೆಯುತ್ತವೆ. ಕೊನೆಯ ೨॥ ವರ್ಷಗಳು ಮಾತ್ರ ಬಹಳೇ ಕಷ್ಟಮಯವಾಗಿರುತ್ತವೆ. ಚತುರ್ಥ, ಪಂಚಮ ಶನಿಯು ತುಲಾರಾಶಿಯ

ವರಿಗೆ ಅಶುಭ ಕಾರಕನಲ್ಲ. ಏಕೆಂದರೆ ಮಕರ ಹಾಗೂ ಕುಂಭರಾಶಿಗಳಲ್ಲಿಯು ಶನಿಯು ಅಶುಭನಾಗುವದಿಲ್ಲ. ಆದರೆ ಮೂರನೇ ಶನಿಯು ಮಾತ್ರ, ತುಲಾರಾಶಿಯವರಿಗೆ ಶುಭಕಾರಿ ಆಗುವದಿಲ್ಲ. ಆದರೆ ಸಪ್ತಮ ಶನಿಯು ಮೇಷರಾಶಿಯಲ್ಲಿರುವದರಿಂದ ಅಶುಭ ಫಲದಾಯಕನು. ಸಿಂಹಸ್ಥ ಶನಿಯು ಏಕಾದಶನಿದ್ದರೂ ಅಶುಭ ಫಲವನ್ನು ಕೊಡುತ್ತಾನೆ. ಆದರೆ ದಶಮ ಶನಿಯು ಏಕಾದಶ ಶನಿಯಷ್ಟು ಅಶುಭನಲ್ಲ. ಆದರೂ ಕೂಡ ದಶಮ ಏಕಾದಶಗಳಲ್ಲಿ ಶನಿಯು ಒಟ್ಟಿನ ಮೇಲೆ ಅಶುಭನು.

ಹೀಗೆ ತುಲಾ ರಾಶಿಯವರಿಗೆ ೨-೩-೭-೧೧ನೇ ಶನಿಯು ಅಶುಭದಾಯಕನು. ಹಾಗೂ ೬-೧೦ನೇ ಶನಿಯು ಉಕ್ತ ಶನಿಗಿಂತ ಕಡಿಮೆ ಅಶುಭನು ಇರುತ್ತಾನೆ. ಆದರೂ ಸಿಂಹ ರಾಶಿಯವರಷ್ಟು ಸಾಡೇಸಾತಿಯು ಇವರಿಗೆ ಇರುವದಿಲ್ಲ.

ವೃಶ್ಚಿಕ :— ವೃಶ್ಚಿಕ ರಾಶಿಯವರಿಗೆ ೧೨ನೇ ಶನಿಯು ತುಲಾ ರಾಶಿಯೇ ಬರುವದರಿಂದ ಅಶುಭನಾಗುವದಿಲ್ಲ. ಆದುದರಿಂದ ಸಾಡೇಸಾತಿಯ ಮೊದಲಿನ ೨॥ ವರ್ಷಗಳು ಕಷ್ಟಮಯವಾಗುವದಿಲ್ಲ. ಆದರೆ ಶನಿಯು ವೃಶ್ಚಿಕದಲ್ಲಿ ಪರಿಭ್ರಮಿಸುವ ಮತ್ತು ಧನು ರಾಶಿಯಲ್ಲಿ ಇರುವವರೆಗೆ ಮಾತ್ರ ಸಾಡೇಸಾತಿಯಂತೆ ಫಲವನ್ನು ಕೊಡುತ್ತಾನೆ. ಆದರೆ ೪ನೇ ಶನಿಯು ಅಶುಭನಲ್ಲ. ಕುಂಭ ರಾಶಿಸ್ಥ ಶನಿಯು ಇದ್ದುದರಿಂದ ಅವನು ಅಶುಭನಲ್ಲ. ಆದರೆ ಪಂಚಮಶನಿಯು ಮಾತ್ರ ಅಶುಭಕಾರಕನು ಏಕೆಂದರೆ ಮೀನ ರಾಶಿಯಲ್ಲಿಯ ಶನಿಯು ಅಶುಭನು ಅವರಂತೆ ಶನಿಯು ೬ನೇಯವನಿದ್ದಾಗ್ಯೂ ಮೇಷ ರಾಶಿಯಲ್ಲಿ ಭ್ರಮಿಸುವದರಿಂದ ಅಶುಭಕಾರಕನು. ಆದರೆ ೮ನೇ ಶನಿಯು ಅಶುಭನಲ್ಲ. ೯-೧೦ನೇ ಶನಿಯು ಮಾತ್ರ ಅಶುಭನು.

ಹೀಗೆ ೧-೨-೫-೬ನೇ ಶನಿಯು ಬಹಳೇ ಅಶುಭಕಾರಕನು ಹಾಗೂ ೯-೧೦ನೇ ಶನಿಯು ಅಶುಭನು ಇರುತ್ತಾನೆ.

ಧನು:— ಧನು ರಾಶಿಯವರಿಗೆ ಸಾಡೇಸಾತಿಯ ಮೊದಲಿನ ೫ ವರ್ಷಗಳು ಕಷ್ಟದಾಯಕವಾಗಿರುತ್ತವೆ. ಆದರೆ ಕೊನೆಯ ೨॥ ವರ್ಷಗಳು ಮಾತ್ರ ಚೆನ್ನಾಗಿರುತ್ತವೆ. ಶನಿಯು ವೃಶ್ಚಿಕ ರಾಶಿಗೆ ಬರಲು ಧನು ರಾಶಿಯವರಿಗೆ ೧೨

ನೆಯವನಾಗುತ್ತಾನೆ. ಹಾಗೂ ಧನು ರಾಶಿಗೆ ಬರಲು ೧ನೆಯವನಾಗುತ್ತಾನೆ. ಹೀಗೆ ಈ ಎರಡು ರಾಶಿಗಳಲ್ಲಿ ಇರುವಾಗ ಶನಿಯು ಅಶುಭಕಾರಕನು ಆದರೆ ಮಕರದಲ್ಲಿಯ ೨ನೆಯ ಶನಿಯು ಅಶುಭನಲ್ಲ. ಮೀನ ಹಾಗೂ ಮೇಷಗಳಲ್ಲಿಯ ೪-೫ನೇಯ ಶನಿಯೂ ಕೂಡ ಅಶುಭಕಾರಕನು. ಮೇಷ ರಾಶಿಯಂತೂ ಶನಿಗೆ ನೀಚ ರಾಶಿಯು. ಅದರಂತೆ ಕರ್ಕ-ಸಿಂಹಗಳಲ್ಲಿಯ ಶನಿಯು ಕೂಡ ಅಶುಭನು ಅಂದರೆ ೮-೯ನೇ ಶನಿಯೂ ಕೂಡ ಸಾಡೇಸಾತಿಯಂತೆಯೇ ಫಲವನ್ನು ಕೊಡುತ್ತಾನೆ. ವಿಶೇಷವಾಗಿ ಶನಿಯ ಪರಿಭ್ರಮಣವು ಸಿಂಹದಲ್ಲಿ ಇದ್ದಾಗ ದುಃಖದಸಮಯ ತಲೆದೋರುವವು.

ಹೀಗೆ ಧನು ರಾಶಿಯವರಿಗೆ ೧೨-೧-೫-೬ ನೇಯ ಶನಿಯು ಬಹಳೇ ಕಷ್ಟ ಕೊಡುವವನಾಗುತ್ತಾನೆ. ೮-೯ನೇಯ ಶನಿಯು ಅಶುಭನಾಗಿರುತ್ತಾನೆ. ( ಉಕ್ತ ೧೨-೧-೫-೬ ನೆಯ ಶನಿಗಿಂತ ಸಲ್ಪ ಕಡಿಮೆ.)

ಮಕರ:— ಈ ರಾಶಿಯವರಿಗೆ ಸಾಡೇಸಾತಿಯ ಮೊದಲಿನ ೨॥ ವರ್ಷಗಳು ಮಾತ್ರ ಕಷ್ಟಮಯವಾಗಿರುತ್ತವೆ. ಅಂದರೆ ಶನಿಯು ಧನು ರಾಶಿಯಲ್ಲಿ ಇರುವವರೆಗೆ ಮಾತ್ರ. ಮುಂದೆ ೧-೨ನೆಯ ಶನಿಯು ಶುಭಫಲ ವನ್ನು ಕೊಡುತ್ತಾನೆ. ಆದರೆ ೪ನೆಯ ಶನಿಯು ತುಂಬಾ ಅಶುಭನು. ಆ ಸಮಯಕ್ಕೆ ಶನಿಯ ಪರಿಭ್ರಮಣವು ಮೇಷದಲ್ಲಿ ಇರುತ್ತದೆ. ಅದರಂತೆ ಎಂಟನೇ ಶನಿಯು ಕೂಡ ತುಂಬಾ ಅಶುಭನು. ಆದರೆ ೩ನೇ, ೬ನೇ ಹಾಗೂ ೧೧ನೇ ಶನಿಯೂ ಕೂಡ ಹಾನಿಕಾರಕನು. ಆದರೆ ಉಕ್ತ ೧೨-೪-೮ನೇ ಶನಿಯಷ್ಟು ಅಶುಭನಲ್ಲ; ವೃಷಭದಲ್ಲಿದ್ದ ಪಂಚಮ ಶನಿಯು ಅಶುಭನಾಗುವ ದಿಲ್ಲ; ವೃಷಭವು ಶನಿಯ ಮಿತ್ರಗ್ರಹದ ರಾಶಿ ಹಾಗೂ ಭೂತತ್ವದ ರಾಶಿಯು ಇರುತ್ತದೆ. ಹೀಗೆ ಮಕರ ರಾಶಿಯವರಿಗೆ ೧೨-೪-೮ನೇ ಶನಿಯು ಬಹಳೇ ಅಶುಭನು. ೩-೬-೧೧ನೇ ಶನಿಯು ಉಕ್ತ ಶನಿಗಿಂತ ಸ್ವಲ್ಪ ಕಡಿಮೆ ಅಶುಭ ಫಲವನ್ನು ಕೊಡುತ್ತಾನೆ. ಆದರೆ ಪಂಚಮ ಶನಿಯು ಅಶುಭನಾಗುವದಿಲ್ಲ.

ಕುಂಭ: — ಕುಂಭ ರಾಶಿಯವರಿಗೆ ಸಾಡೇಸಾತಿಯ ಕೊನೆಯ ೨॥ ವರ್ಷಗಳು ಕಷ್ಟಮಯವಾಗಿರುತ್ತವೆ. ಆದರೆ ಮೊದಲಿನ ೫ ವರ್ಷಗಳಲ್ಲಿ ಸಾಡೇಸಾತಿಯಿದ್ದರೂ ಅದರ ಪರಿಣಾಮವು ಆಗುವದಿಲ್ಲ. ಆದರೆ ೩ನೇ ಶನಿಯು

ಬೇರೆ ಜನರಿಗೆ ಶುಭನಿದ್ದಾಗ್ಯೂ ಕುಂಭ ರಾಶಿಯವರಿಗೆ ಮಾತ್ರ ಅಶುಭನು. ಏಕೆಂದರೆ ಆಗ್ಗೆ ಶನಿಯು ಪರಿಭ್ರಮಣವು ಮೇಷ ರಾಶಿಯಲ್ಲಿ ಇರುತ್ತದೆ. ಅದರಂತೆಯೇ ೬-೭ನೇ ಶನಿಯೂ ಕೂಡ ಹಾನಿಕಾರಕನು. ವಿಶೇಷತಃ ೭ನೇ ಶನಿಯು ಹಾನಿ ಪ್ರದಾಯಕನು. ಕೊನೆಯದಾಗಿ ೧೦-೧೧ನೇ ಶನಿಯು ಅಂದರೆ ವೃಶ್ಚಿಕ ಧನುಗಳಲ್ಲಿಯ ಶನಿಯು ಕೂಡಾ ಹಾನಿದಾಯಕನು. ವಿಶೇಷತಃ ೧೧ನೇ ಶನಿಯು ತುಂಬಾ ಅಶುಭನಿರುತ್ತಾನೆ.

ಕುಂಭ ರಾಶಿಯವರಿಗೆ ೨-೩-೭-೧೦ನೇ ಶನಿಯು ತೀರ ಅಶುಭನು. ೬-೧೧ನೇ ಶನಿಯು ೨-೩-೭-೧೦ನೇ ಶನಿಗಿಂತ ಕಡಿಮೆ ಅಶುಭನಲ್ಲ. ಏಕೆಂದರೆ ಅವನ ಭ್ರಮಣವು ಕನ್ಯಾ ರಾಶಿಯಲ್ಲಿ ಇರುತ್ತದೆ. ಬಹುತರವಾಗಿ ಉಳಿದವರಿಗೆ ಅಂದರೆ ಕುಂಭ ರಾಶಿಯವರನ್ನು ಬಿಟ್ಟು ಉಳಿದ ರಾಶಿ ಜನರಿಗೆ ೩-೬-೧೧ನೇ ಶನಿಯು ಶುಭನು. ೪-೫-೮ನೇ ೧೨-೧-೨ನೇ ಶನಿಯು ಅಶುಭನಿರುತ್ತಾನೆ. ಆದರೆ ಕುಂಭ ರಾಶಿಯವರಿಗೆ ಇದರ ವಿರುದ್ಧ ಫಲಗಳು ದೊರೆಯುವದನ್ನು ಕಾಣಬಹುದು. ಶನಿಯು ೩-೬-೧೧ನೇದವನಿದ್ದಾಗ ಶತ್ರು ಕ್ಷೇತ್ರ ಮತ್ತು ಅಶುಭೃಕತ್ವ ( ಶನಿಯ ಅಶುಭ ಕತ್ವ )ದ ರಾಶಿಯಲ್ಲಿರುವದರಿಂದ ಶುಭ ಫಲಗಳು ದೊರೆಯಲಾರವು. ಆದುದರಿಂದ ಈ ರಾಶಿಯವರಿಗೆ ದುರ್ದೈವಿಗಳೆಂದು ಕರೆಯುವ ವಾಡಿಕೆ ಇದೆ.

ಮೀನ:— ಇವರಿಗೆ ಸಾಡೇಸಾತಿಯ ಮೊದಲಿನ ೨॥ ವರ್ಷಗಳು ಶುಭಕಾರಿಯಾಗಿರುತ್ತವೆ. ಆದರೆ ಕೊನೆಯ ೫ ವರ್ಷಗಳು ವಿಶೇಷತಃ ಕೊನೆಯ ೨॥ ವರ್ಷಗಳು ಅಶುಭದಾಯಕವಿರುತ್ತವೆ. ಶನಿಯು ೧-೨ನೆಯವನಿರುವಾಗ ಮೀನ ಮೇಷಗಳಲ್ಲಿ ಪರಿಭ್ರಮಿಸುತ್ತಾನೆ. ಇವೆರಡು ರಾಶಿಗಳಲ್ಲಿ ಶನಿಯು ಅಶುಭದಾಯಕನು. ಮಿಥುನ ರಾಶ್ಯಾರೂಢದಿಂದ ೪ನೇ ಶನಿಯು ಅಶುಭನಾಗುವದಿಲ್ಲ. ಪಂಚಮ ಶನಿಯು ಕರ್ಕ ರಾಶಿಯಲ್ಲಿರುವದರಿಂದ ತೀರ ಅಶುಭನು. ಅದರಂತೆಯೇ ಸಿಂಹದಲ್ಲಿದ್ದ ೬ನೇ ಶನಿಯೂ ಕೂಡ ಅಶುಭನು. ಶನಿಯು ಅಷ್ಟಮನಾದರೂ ತುಲಾ ರಾಶಿಯಲ್ಲಿರುವದರಿಂದ ಅಶುಭನಾಗುವದಿಲ್ಲ. ಆದರೆ ೯-೧೦ನೇ ಶನಿಯು ಸ್ವಲ್ಪ ಅಶುಭದಾಯ ಹೀಗೆ ಮೀನ ರಾಶಿಯವರಿಗೆ ೧-೨-೫ನೇ ಶನಿಯು ತೀರ ಅಶುಭದಾಯಕನೂ ೬-೯-೧೦ನೇ ಶನಿಯು ಸ್ವಲ್ಪ ಕಡಿಮೆ ಅಶುಭನೂ ಇರುತ್ತಾನೆ. ಆದರೆ ೮ನೇ ಶನಿಯು ಅಶುಭನಾಗುವದಿಲ್ಲ

# ೬ ಸ್ಥಾನಗಳ ಮೇಲೆ ಶನಿಯ ಪರಿಭ್ರಮಣ

ಸಾಡೇಸಾತಿಯ ಬಗೆಗೆ ವಿಚಾರಿಸುವಾಗ, ಯಾವ ಸ್ಥಾನದ ಮೇಲಿಂದ ಶನಿಯ ಪರಿಭ್ರಮಣವು ಆಗುತ್ತದೆ ಎಂಬುದನ್ನು ಕೂಡ ವಿಚಾರಿಸಬೇಕು. ಸಾಡೇಸಾತಿಯಲ್ಲಿ ಶನಿಯ ಪರಿಭ್ರಮಣವು ಆ ಸ್ಥಾನಗಳನುಸಾರವಾಗಿ ಫಲವನ್ನು ಕೊಡುತ್ತದೆ. ಸ್ಥಾನದ ಮಹತ್ವವು ಆದರ ಭಾವದಿಂದ ತಿಳಿಯುತ್ತದೆ. ಅದಕ್ಕಾಗಿಯೇ ಪ್ರತಿಯೊಬ್ಬನು ತನ್ನ ಕುಂಡಲಿಯಲ್ಲಿ (ಸಾಡೇ ಸಾತಿಯ ಕಾಲಕ್ಕೆ ) ಯಾವ ಸ್ಥಾನದ ಮೇಲಿಂದ ಶನಿಯ ಪರಿಭ್ರಮಣ ವಾಗುತ್ತದೆ ಎಂಬುದನ್ನು ಮೊದಲು ತಿಳಿಯಬೇಕು.

ಸಾಡೇಸಾತಿಯಲ್ಲಿ ಎಲ್ಲ ಜನರಿಗೂ ಒಂದೇ ತರಹದ ಅಡಚಣಗಳು ಬರುವದಿಲ್ಲ, ಕೆಲವರಿಗೆ ಸಾಡೇಸಾತಿಯಲ್ಲಿ ವಿದ್ಯೆಗೆ ತೊಂದರೆ ಇದ್ದರೆ, ಮತ್ತೆ ಕೆಲವರಿಗೆ ದೈಹಿಕ ತೊಂದರೆ, ಹಾಗೂ ಹಲವರಿಗೆ ಆರ್ಥಿಕ ತೊಂದರೆ; ಇದರ ಗುಟ್ಟೇನು? ಇದಕ್ಕೆ ಉತ್ತರ ರೂಪವಾಗಿ ಜನರ ರಾಶಿಗಳು ಭಿನ್ನ ಭಿನ್ನವಿರುತ್ತವೆ ಎಂದು ಹೇಳಬಹುದು. ಆದರೆ ಇದು ಸಮಂಜಸವಲ್ಲ. ಒಂದೇ ರಾಶಿಯ ಜನರ ಮೇಲೆ ಸಾಡೇಸಾತಿಯ ಸಮಯದಲ್ಲಿ ಭಿನ್ನ ಭಿನ್ನ ಪರಿಣಾಮಗಳೂ ಆಗುವದುಂಟು. ಉದಾಹರಣೆಗಾಗಿ ವೃಶ್ಚಿಕ ರಾಶಿಯವ ರನ್ನೇ ತೆಗೆದುಕೊಳ್ಳಿರಿ. ವೃಶ್ಚಿಕ ರಾಶಿ ಎಲ್ಲ ಜನರಿಗೆ ಸಾಡೇಸಾತಿಯ ಕಾಲಕ್ಕೆ ಒಂದೇ ತರಹದ ಪರಿಣಾಮವಾಗುವದಿಲ್ಲ. ಕೆಲವರಿಗೆ ಅಪಮೃತ್ಯು ಸಂಭ ವಿಸಿದರೆ ಮತ್ತೆ ಕೆಲವರಿಗೆ ಜೇಲಿಗೆ ಹೋಗುವ ಪ್ರಸಂಗ ಒದಗಿದವು. ಇದ ಕ್ಕೆಲ್ಲ ಶನಿಯ ಪರಿಭ್ರಮಣ ಭಿನ್ನ ಭಿನ್ನ ಸ್ಥಾನಗಳ ಮೇಲಿಂದ ಆಗುವುದೆ ಕಾರಣ. ರಾಶಿಯು ಒಂದೇ ಇದ್ದರೂ ಬೇರೆಬೇರೆ ಸ್ಥಾನಗಳ ಮೇಲಿಂದ (ಅಂದರೆ ಭಾವಗಳ ಮೇಲಿಂದ)ಪರಿಭ್ರಮಣವಾಗುವದರಿಂದ ಪರಿಣಾಮಗಳು ಭಿನ್ನಭಿನ್ನ. ಒಂದೇ ರಾಶಿಯವರಿಗೆ ಒಂದೇ ತರಹದ ಪರಿಣಾಮವಾಗುತ್ತದೆ ಎಂಬುದು ತಪ್ಪು ಕಲ್ಪನೆ. ಅಥವಾ ಒಂದೇ ಲಗ್ನವುಳ್ಳವರಿಗೆ ಒಂದೇ ತರಹದ ಪರಿಣಾಮವು ಸಾಡೇಸಾತಿಯಲ್ಲಿ ಆಗುವದೆಂಬುದೂ ತಪ್ಪು ಕಲ್ಪನೆ. ಒಂದೇ ರಾಶಿ ಹಾಗೂ ಒಂದೇ ಲಗ್ನವುಳ್ಳವರ ಪರಿಣಾಮಗಳು ಮಾತ್ರ ಸ್ವಲ್ಪ ಹೆಚ್ಚುಕಡಿಮೆ ಒಂದೇ ಆಗುತ್ತವೆ. ಆದುದರಿಂದ ಸಾಡೇಸಾತಿಯ ಕಾಲಕ್ಕೆ

ಶನಿಯ ಆಯಾ ಸ್ಥಾನಗಳ ಪರಿಣಾಮವನ್ನು ಕೆಳಗೆ ಕೊಡಲಾಗಿದೆ.

ತನುಸ್ಥಾನ :—ಸಾಡೇಸಾತಿಯಲ್ಲಿ ಶನಿಯ ಪರಿಭ್ರಮಣವು ತನುಸ್ಥಾನದ ಮೇಲಿಂದ ಆಗುತ್ತಿದ್ದರೆ ಆರೋಗ್ಯಕ್ಕೆ ತೊಂದರೆ, ದೈಹಿಕ ತೊಂದರೆ, ಸತ್ ಕರ್ಮಗಳಲ್ಲಿ ಜಿಗುಪ್ಸೆ, ಮಹತ್ವಾಕಾಂಕ್ಷೆಗಳ ಪರಾಭವ, ತಲೆಯ ಮೇಲೆ ಪರಿಣಾಮವಾಗಿ ಹುಚ್ಚು ಹಿಡಿಯುವ ಸಂಭವ ಹೆಚ್ಚು. ಯಾವದೇ ಸಂಗತಿಯು ತೀವ್ರ ಪ್ರಭಾವವಾಗುವುದು. ಸ್ವಪರಿಶ್ರಮದ ಕೆಲಸದಲ್ಲಿ ವಿಘ್ನಗಳೇ ಹೆಚ್ಚು, ವ್ಯರ್ಥಶ್ರಮ, ನಿರಾಶೆ,

ಧನ ಸ್ಥಾನ:—ಶನಿಯ ಪರಿಭ್ರಮಣವು ಧನಸ್ಥಾನದ ಮೇಲಿಂದ ಆಗುತ್ತಿದ್ದಾಗ ಸಾಡೇಸಾತಿಯಿದ್ದರೆ ಸಾಂಪತ್ತಿಕ ಸ್ಥಿತಿಯು ಒಮ್ಮೆಲೆ ಅಧೋಗತಿಗೆ ಮುಟ್ಟುತ್ತದೆ. ವಿಶೇಷವಾಗಿ ಪಿತ್ರಾರ್ಜಿತ ಆಸ್ತಿಗೆ ಹಾನಿ, ಕೌಟುಂಬಿಕ ಕ್ಲೇಶ, ಪ್ರಾಪಂಚಿಕ ಸುಖದಲ್ಲಿ ತೊಂದರೆ, ವಿಶೇಷವಾಗಿ ಕಲಹ ಮುಂತಾದವುಗಳಿಂದ ಅರುಚಿ, ಸುವರ್ಣ ರತ್ನ ಇತ್ಯಾದಿಗಳ ನಷ್ಟ, ಸುಖ-ಐಶ್ವರ್ಯಕ್ಕೆ ಧಕ್ಕೆ, ನೇತ್ರಪೀಡಾ, ಗಂಟಲು ರೋಗ, ಶಾಸ್ತ್ರಿಗೆ ಪಶುಗಳಿಗೆ ಅಪಘಾತ ಸಂಭವಿಸುವ ಭಯ. ಒಟ್ಟಿನಲ್ಲಿ ಸಾಡೇಸಾತಿಯಲ್ಲಿ ಶನಿಯ ಭ್ರಮಣವು ದ್ವಿತೀಯ ಸ್ಥಾನದ ಮೇಲಿಂದಾಗುತ್ತಿದ್ದರೆ ಸಾಂಪತ್ತಿಕ ಸ್ಥಿತಿಯು ಒಮ್ಮೆಲೆ ಕೆಳಗೆ ಇಳಿಯುತ್ತದೆ. ಹಾಗೂ ನಾನಾ ಕಾರಣಗಳ ಮೂಲಕ ಧನದ ಅಪವ್ಯಯವಾಗುತ್ತದೆ.

ಸಹಜ ಸ್ಥಾನ :—ಸಹಜ ಸ್ಥಾನದ ಮೇಲಿಂದ ಶನಿಯ ಭ್ರಮಣವಾಗ ಸಾಡೇಸಾತಿ ಇದ್ದರೆ ಸಹೋದರರೊಡನೆ ಭಿನ್ನಾಭಿಪ್ರಾಯ, ಸಹೋದರರೊಡನೆ ವ್ಯಾಜ್ಯ ಇತ್ಯಾದಿ ವಿಷಯಗಳು ಸಂಭವಿಸುವವು. ಕೆಲವೊಂದು ಸಮಯದಲ್ಲಿ ಸಹೋದರರಿಂದ ಅಗಲುವ ಪ್ರಸಂಗಗಳೂ ಬರುವವು. ನೌಕರ ಚಾಕರರಿಂದ ಹಾನಿ ಅಂದರೆ ಸ್ವಂತದ ನೌಕರರಾಗಲಿ, ಕೈಕೆಳಗಿನ ಜನರಾಗಲಿ ತೊಂದರೆ ಕೊಡುತ್ತಾರೆ. ಹಾಗೂ ಅವರಿಂದ ಗಂಡಾಂತರ, ಅಪಕೀರ್ತಿ, ಸಾಹಸ ಕೆಲಸಗಳಲ್ಲಿ ಪೆಟ್ಟು ಹಾಗೂ ನಿರುತ್ಸಾಹವನ್ನುಂಟು ಮಾಡುವ ಕೃತ್ಯಗಳು ಜರಗುವವು. ವಾದ-

ಸ್ಪರ್ಧೆ - ಚುನಾವಣೆಗಳಲ್ಲಿ ತೊಂದರೆ ಹಾಗೂ ಅಪಯಶಸ್ಸು. ರಾಸಾಯನಿಕ ಕೆಲಸದಲ್ಲಿ ಅಪಘಾತ. ಜೀವದ ಗೆಳೆಯರ ಸೌಖ್ಯಕ್ಕೆ ತೊಂದರೆ, ವಿಷದ ಭಯ. ವಿಶೇಷವಾಗಿ ವಿಷಮಿಶ್ರಿತ ಆಹಾರದ ಸೇವನೆಯ ಭಯ ಅಥವಾ ವಿಷ ಪ್ರಯೋಗದ ಭಯ, ಭಗಿನಿಗೆ ಪೆಟ್ಟು ತಗಲುವ ಸಂಭವ, ಕಿವಿಯ ಮೇಲೆ ಪರಿಣಾಮ, ಡಾಕ್ಟರಿಗೆ ವಿಶೇಷವಾಗಿ ಪ್ರತಿಕೂಲ.

**ಸುಖ ಸ್ಥಾನ:**—ಸುಖಸ್ಥಾನ ಇಲ್ಲವೆ ಚತುರ್ಥ ಸ್ಥಾನದ ಮೇಲಿಂದ ಶನಿಯು ಭ್ರಮಿಸುವಾಗ ಸಾಡೇಸಾತಿ ವಹತ್ಯ ಸೌಖ್ಯಕ್ಕೆ ತೊಂದರೆ ಮೋಟರ, ಸ್ಕೂಟರ ಮೊದಲಾದ ವಾಹನಗಳಿಂದ ತೊಂದರೆ. ಭಯಪ್ರದ ಸ್ಥಿತಿಯು ಚಿಂತಾಜನಕವಾಗಿರುವ ಸಂಭವ. ಹಿಪ್ನಾಟೀಜ ಮಾದಕದ್ರವ್ಯಗಳಿಂದ ನಿದ್ರಾ ಭಂಗ ಐಶ್ವರ್ಯಕ್ಕೆ ತೊಂದರೆ. ಅಪ್ತವರ್ಗದವರಿಂದ ತೊಂದರೆ. ಎಲ್ಲ ತರಹದ ಸೌಖ್ಯಕ್ಕೆ ಎರವಾಗಬೇಕಾಗುವದು. ಕೋರ್ಟು ಕಚೇರಿಗಳಲ್ಲಿ ಅಪಯಶಸ್ಸು. ಪರೋಪಕಾರಿ ಕೆಲಸದಿಂದ ವಿಮುಖನಾಗುವದು, ಜಮೀನು ಅಥವಾ ಗಂಟು ಹಾಳಾಗುವದು. ಅಥವಾ ಮಾರಾಗುವದು. ವಿಶೇಷವಾಗಿ ಮೇಲೆ ನಾಡುಗಳಲ್ಲಿಯ ಭೂಮಿಗಳ ಹಾನಿ, ಮನೆಬಿದ್ದು ಹಾನಿಯಾಗುವ ಸಂಭವ. ಫೋರ್ಜರೀ ಇಲ್ಲವೆ ಕಪಟ ವ್ಯವಹಾರದಿಂದ ಹಾನಿ. ಹೃದಯ ವಿಕಾರ (ಹಾರ್ಟ್‌ಫೇಲ) ಆಗುವ ಸಂಭವ, ವಿಶೇಷವಾಗಿ ಶ್ರೀಮಂತ ಜಮೀನದಾರರಿಗೆ ತೊಂದರೆ ಹೆಚ್ಚು. ಕೋರ್ಟು ಕಚೇರಿಗಳ ಮಾರ್ಫತ ಮನೆಗಳ ಹಾಲಸಾ ಆಗುವುದು ಅಥವಾ ಲಿಲಾವ ಆಗುವ ಸಂಭವ.

**ಸುತ ಸ್ಥಾನ:**- ಪಂಚಮ ಸ್ಥಾನದ ಮೇಲಿಂದ ಶನಿಯು ಭ್ರಮಿಸುವಾಗ ಸಾಡೇಸಾತಿಯು ಇದ್ದರೆ ಸಂತಾನದ ಕ್ಲೇಶ, ಶಿಕ್ಷಣದಲ್ಲಿ ತೊಂದರೆ, ಎಡರು ಅಥವಾ ಶಿಕ್ಷಣವನ್ನು ನಿಲ್ಲಿಸುವ ಪ್ರಸಂಗವೂ ಬರುವದು. ಅಕಸ್ಮಾತ ಮೃತ್ಯು, ಮಾನ ಸನ್ಮಾನಗಳ ಅಭಾವ, ಅಪಮಾನಿತರಾಗುವ ಸಂಭವ, ಮಾಂತ್ರಿಕ ವಿದ್ಯೆಯಿಂದ ಹಾನಿ, ಸ್ತ್ರೀಯರಿಗೆ ಗರ್ಭಪಾತವಾಗುವ ಸಂಭವ ಹೆಚ್ಚು, ಎಲ್ಲ ತರಹದ ಸಿದ್ಧಿಗಳಲ್ಲಿ ವಿಘ್ನ, ಮಂತ್ರ ಸಿದ್ಧಿಯಲ್ಲಿ ತೊಂದರೆ. ಹೊಟ್ಟೆನೋವಿನ ವಿಕಾರ. ಸಂಪಾದಕ ಹಾಗೂ ಲೇಖಕ ವರ್ಗದವರಿಗೆ ವಿಶೇಷತಃ ತೊಂದರೆ, ಮೆಂದುಳಿನ ಮೇಲೆ ಪರಿಣಾಮ, ಜಲೋದರ ರೋಗ ಭಯ, ಸನ್ಮಾನಕ್ಕೆ ತೊಂದರೆ.

**ಷಷ್ಠ ಸ್ಥಾನ:**— ಸಾಡೇಸಾತಿಯಲ್ಲಿ ಶನಿಯು ಪರಿಭ್ರಮಣವು ಷಷ್ಠ ಸ್ಥಾನದ ಮೇಲಿಂದ ಆಗುತ್ತಿದ್ದರೆ ಶತ್ರುಭಯ, ವ್ಯಾಪಾರದಲ್ಲಿ ಹಾನಿ, ಚೋರಭಯ, ಅನೇಕ ತರಹದ ಸಂಕಟಗಳು, ಸೋದರ ಮಾವನೊಡನೆ ವಿರಸ ಅಥವಾ ಅವನಿಂದ ಅಗಲುವಿಕೆ, ಪ್ರಾಪಂಚಿಕ ಹಾಗೂ ಔದ್ಯೋಗಿಕ ತೊಂದರೆ. ಅಪಮಾನಕಾರಕ ಪ್ರಸಂಗ, ಕಾರಾಗೃಹವಾಸದ ಯೋಗ. ಅನೇಕ ತರಹದ ರೋಗಗಳಿಂದ ದೇಹ ಬಳಲುವುದು. ವಿಶೇಷವಾಗಿ ನಡು ಕಟ್ಟಿನ ತೊಂದರೆ, ಧನುರ್ವಾಯು (ಸೆಟೆಯುವ) ಬೇನೆಯಿಂದ ಬಳಲುವಿಕೆ, ವಿಶೇಷವಾಗಿ ಸ್ವತಂತ್ರ ಉದ್ಯೋಗಸ್ಥರಿಗೆ ಹಾನಿ.

**ಸಪ್ತಮ ಸ್ಥಾನ:**— ಸಾಡೇಸಾತಿಯಲ್ಲಿ ಶನಿಯು ಸಪ್ತಮ ಸ್ಥಾನದ (ಮೂಲಕ) ಮೇಲಿಂದ ಭ್ರಮಿಸುತ್ತಿರುವಾಗ ದಾಂಪತ್ಯ ಸೌಖ್ಯಕ್ಕೆ ತೊಂದರೆ, ಅಲ್ಲ-ಸಲ್ಲದ ಅಪವಾದ, ಜಾರ ಕೃತ್ಯ, ವ್ಯಾಪಾರದಲ್ಲಿ ಒಮ್ಮೆಲೆ ಕಡಿತ. ಆಭರಣಗಳು ಕಳೆದುಹೋಗುವಿಕೆ ಇಲ್ಲವೆ ಕಳ್ಳರ ಪಾಲಾಗುವುದು. ಘೋರವಾದ ಕ್ರಿಯೆಗಳು ಜರುಗುವವು. ವಾದವಿವಾದ ಸ್ಪರ್ಧೆಗಳಲ್ಲಿ ಅಪಯಶಸ್ಸು, ದಾಂಪತ್ಯ ಜೀವನದಲ್ಲಿ ತುಂಬಾ ಸಂಕಟ, ದೂರದ ಪ್ರವಾಸದಲ್ಲಿ ತೊಂದರೆ. ಮೂತ್ರಾಶಯ ಗರ್ಭಾಶಯಗಳ ತೊಂದರೆ. ದಿವಾಣಿ ಖಟ್ಲೆಗಳಲ್ಲಿ ಪರಾಭವ, ಪ್ರೇಮಿಗಳ ವಿರಹ ಹಾಗೂ ವಿರಸ, ವಿಶೇಷವಾಗಿ ವ್ಯಾಪಾರಿ ವರ್ಗಕ್ಕೆ ಹಾನಿ.

**ಅಷ್ಟಮ ಸ್ಥಾನ:**—ಸಾಡೇಸಾತಿಯ ಸಮಯಕ್ಕೆ ಶನಿಯು ಪರಿಭ್ರಮಣವು ಅಷ್ಟಮ ಸ್ಥಾನದ ಮೇಲಿಂದ ಆಗುತ್ತಿದ್ದರೆ, ಆಕಸ್ಮಾತ್ತಾಗಿ ಧನಕ್ಷಯ ವಾಗುತ್ತದೆ. ಸಟ್ಟಾ ಲಾಟರಿ ಧಂದೆಗಳಲ್ಲಿ ಕಲ್ಪನಾತೀತ ಹಾನಿ, ಸರ್ಪ ವಗೈರೆ ವಿಷ ಜಂತುಗಳ ಭಯ ಮತ್ತು ಅವುಗಳಿಂದ ಹಾನಿ, ಲಂಚ ಪ್ರಕರಣದಲ್ಲಿ ತುಂಬಾ ಹಾನಿ, ಆಪತ್ತು ಹಾಗೂ ಎಡರುತೊಡರುಗಳ ಸರಮಾಲೆ, ಅಪಮೃತ್ಯು ಭಯ, ಕೈಕೊಂಡ ಕಾರ್ಯಗಳಲ್ಲಿ ಪರಾಜಯ. ವಿಶೇಷವಾಗಿ ಅಪಘಾತ ಮತ್ತು ಆತ್ಮಹತ್ಯೆಗಳ ಅಥವಾ ವಿಷಮ ಜ್ವರದ ಸಂಭವ ಹೆಚ್ಚು. ವಿಶೇಷವಾಗಿ ಕಂಟ್ರಾಕ್ಟರರಿಗೆ ಹೆಚ್ಚು ಕಷ್ಟ. ಅದರಂತೆಯೇ ಜೂಜುಗಾರರಿಗೆ, ಸಟ್ಟಾ ಲಾಟರಿ ವ್ಯಾಪಾರಸ್ಥರಿಗೆ (Speculators) ವಿಶೇಷ ಹಾನಿ.

**ನವಮ ಸ್ಥಾನ:**— ಸಾಡೇಸಾತಿಯಲ್ಲಿ ಶನಿಯ ಭ್ರಮಣವು ನವಮ ಸ್ಥಾನದ ಮೇಲಿಂದ ಆಗುತ್ತಿದ್ದರೆ ತಂದೆಯ ಸುಖಕ್ಕೆ ಎರವಾಗುವ ಪ್ರಸಂಗ ಬರುವದು. ಸಾಮಾಜಿಕ ಕಾರ್ಯಗಳಲ್ಲಿ ತೊಂದರೆ, ತೀರ್ಥಯಾತ್ರೆಗಳಲ್ಲಿ ತೊಂದರೆ ಮತ್ತು ಸಂಕಟ, ಜಲಪರ್ಯಟನ ಹಾಗೂ ವಿದೇಶ ಸಂಚಾರಗಳಲ್ಲಿ ತೊಂದರೆ, ಸಿದ್ಧಿಗೆ ಭಂಗ ಬರುವದು, ಐಶ್ವರ್ಯದಲ್ಲಿ ಒಮ್ಮೆಲೆ ಬದಲಾವಣೆ ಅಂದರೆ ಉಪ್ಪರಿಗೆಯು ತಿಪ್ಪೆಯಾಗುವುದು, ಸತ್ಕರ್ಮ ಹಾಗೂ ಧರ್ಮಗಳಲ್ಲಿ ಅಶ್ರದ್ಧೆ, ದುಷ್ಟಕಲ್ಪನೆ ಹಾಗೂ ದುರಾಚಾರ, ತೊಡೆಗಳಿಗೆ ಅಪಘಾತ ಅಥವಾ ತೊಡೆಗಳು ಕಳಚುವ ಭಯ, ವಿಶೇಷವಾಗಿ ಮಾಂತ್ರಿಕ ತಾಂತ್ರಿಕರಿಗೆ ಯಾವುದೇ ಒಂದು ಆಧ್ಯಾತ್ಮ ಅಥವಾ ತತ್ವಜ್ಞಾನದ ಸಿದ್ಧಿಯನ್ನು ಪಡೆಯಲು ಜನರಿಗೆ ಈ ಸಮಯಕ್ಕೆ ಹೆಚ್ಚು ಅಡೆತಡೆಗಳು ಉಂಟಾಗುವವು.

**ಕರ್ಮ ಸ್ಥಾನ:**—ಶನಿಯು ಪರಿಭ್ರಮಣವು ಹತ್ತನೇ ಸ್ಥಾನದಮೇಲಿಂದ ಇರುವ ಸಮಯಕ್ಕೆ ಸಾಡೇಸಾತಿಯು ಇದ್ದರೆ ಮುಂದೆ ಕಾಣಿಸಿದ ಸಂಗತಿಗಳು ಜರುಗುವವು. ಹೊಲ ಮನೆಗಳ ಖಟ್ಲೆ ಅಂದರೆ ದಿವಾಣಿ ಖಟ್ಲೆಗಳಲ್ಲಿ ಪರಾಜಯ, ಪಿತ್ರಾರ್ಜಿತ ಸಂಪತ್ತಿಯು ಹಾಗೂ ವಿಶೇಷವಾಗಿ ಪಿತೃವಿನ ಸುಖದ ಅಭಾವ, ನೌಕರಿಯಲ್ಲಿ ಹಿಂಬಡತಿ ಹಾಗೂ ಮೇಲ್ವಿಚಾರಕರ ಅವಕೃಪೆ, ಉದ್ಯೋಗ ದಂಧೆಗಳಲ್ಲಿ ಕಲ್ಪನಾತೀತ ಹಾನಿ, ಸ್ಪರ್ಧೆ ಹಾಗೂ ಚುನಾವಣೆಗಳಲ್ಲಿ ಪರಾಜಯ, ಎಲ್ಲ ತರಹದ ಉದ್ಯೋಗಗಳಲ್ಲಿ ಹಾನಿ, ಹೊಟ್ಟೆಗಾಗಿ ದುಡಿಯುವ ಧಂದೆಯಲ್ಲಿಯಂತೂ ಅನೇಕ ವಿಘ್ನಗಳು ತಲೆದೋರುತ್ತವೆ. ವಿಶೇಷವಾಗಿ ಸರಕಾರಿ ನೌಕರರಿಗೆ ತೊಂದರೆ ಹೆಚ್ಚು.

**ಲಾಭ ಸ್ಥಾನ:**—ಶನಿಯು ಪರಿಭ್ರಮಣವು ಹನ್ನೊಂದನೆಯ ಸ್ಥಾನದ ಮೇಲಿಂದ ಇರುವಾಗ ಸಾಡೇಸಾತಿ ಇದ್ದು ಮಿತ್ರರೊಡನೆ ಕಲಹ, ವೈಮನಸ್ಸು, ಅಲಂಕಾರ ಹಾಗೂ ಒಳ್ಳೆಯ ಬಟ್ಟೆಗಳ ಅಭಾವ, ಕೌಟುಂಬಿಕ ವ್ಯವಹಾರದಲ್ಲಿ ಅಪ್ರಿಯತೆ ಹಾಗೂ ಕಲಹ, ಸಾಮಾಜಿಕ ಕೆಲಸದಲ್ಲಿ ಹಾನಿ, ಲೋಕಾಪವಾದಕ್ಕೆ ಗುರಿಯಾಗುವದು, ವಾಹನಗಳ ಭಯ, ಧಾಡಸೀ ಹಾಗೂ ಮಹತ್ವಾಕಾಂಕ್ಷಿಗಳು ಒಮ್ಮೆಟ್ಟಬೇಕಾಗುತ್ತದೆ, ಹಿರಿಯ ಸಹೋದರರೊಂದಿಗ

ಕಲಹ, ಗೃಹ ಹಾಗೂ ಸಮಾಜ ಎರಡೂ ಕಡೆಯಿಂದ ನಿಂದೆ, ಅಪಮಾನ ಇತ್ಯಾದಿ ಬರುತ್ತವೆ. ವಿಶೇಷವಾಗಿ ಆರ್ಥಿಕ ರಂಗದಲ್ಲಿ ಕೆಲಸ ಮಾಡಲು ತೊಂದರೆ ಹೆಚ್ಚು. ಅದರಂತೆ ಮಿಲಿಟರಿ ಹಾಗೂ ಪೋಲೀಸ ಮುಂತಾದವರಿಗೂ ಕೂಡ ಪ್ರತಿಕೂಲ.

ವ್ಯಯ ಸ್ಥಾನ:— ಸಾಡೇಸಾತಿಯಲ್ಲಿ ಶನಿಯು ಭ್ರಮಣವು ೧೨ನೇ ಸ್ಥಾನದ ಮೇಲಿಂದ ಆಗುತ್ತಿದ್ದರೆ ಶತ್ರು ಸಂಕಟ, ಅನೇಕ ತರಹದ ಸಂಕಟಗಳು, ಮಾನಹಾನಿ, ರೋಗರುಜಿನಗಳಿಂದ ಬಳಲುವುದು, ಕಾರಾಗೃಹ ವಾಸ, ರಾಜಕೀಯ ಕಾರ್ಯದಲ್ಲಿ ವಿಫಲತೆ; ಪದಚ್ಯುತಿ, ಗುಪ್ತಶತ್ರುಗಳಿಂದ ಸಂಕಟ, ಋಣಯೋಗ, ನೇತ್ರಪೀಡಾ, ಫಾಶಿ ಅಥವಾ ಸಶ್ರಮ ಶಿಕ್ಷೆ, ಕ್ರಿಮಿನಲ್ ಖಟ್ಲೆ, ಹಾಗೂ ಅವುಗಳಲ್ಲಿ ಪರಾಭವ, ಅಪಘಾತ, ಸಮಾಜದಿಂದ ನಿಂದೆ ಹಾಗೂ ಬಹಿಷ್ಕಾರ, ನಿದ್ರಾಭಂಗ ಎಲ್ಲ ತರಹದ ಆಪತ್ತು, ವಿಶೇಷವಾಗಿ ರಾಜಕೀಯ ಪಟುಗಳಿಗೆ ಹಾನಿ.

——

# ೭. ೭॥ ದಲ್ಲಿ ಶನಿಯ ವಿಚಾರ

## (ಅಷ್ಟಕವರ್ಗ ಪದ್ಧತಿಯಿಂದ)

೭॥ ಕ್ಕೆ ಗುಜರಾತದಲ್ಲಿ ಪನೋತಿ ಎನ್ನುವರು. ೭॥ ದ ವಿಚಾರವನ್ನು ಅಷ್ಟಕವರ್ಗ ಪದ್ಧತಿಯಿಂದ ಮಾಡುವದು ಹೆಚ್ಚು ಶ್ರೇಯಸ್ಕರ. ಚಂದ್ರನಿಂದ ೧೨ನೇ - ೧ನೇ - ೨ನೇ ಮನೆಯಲ್ಲಿ ಶನಿಯ ಸಂಚಾರ ೭॥ ಎಂದು ಕರೆಯಲ್ಪಡುವದು. ಇದಕ್ಕೆ ದಕ್ಷಿಣದವರು ಏಳರಾತವೆಂದು ಕರೆಯುವರು.

ಅಷ್ಟಕವರ್ಗ ಪದ್ಧತಿಯ ಪುರಸ್ಕರ್ತರು ಹೇಳುವದೇನೆಂದರೆ ಈ ರಾಶಿಗಳು ೩೦ ಕ್ಕಿಂತ ಹೆಚ್ಚು ಬಿಂದುಗಳಿಂದ ಒಡಗೂಡಿದ್ದರೆ ಜಾತಕನಿಗೆ ಕಡಿಮೆ ತೊಂದರೆಯಾಗುವದು. ಹೆಚ್ಚು ಪ್ರಮಾಣದಲ್ಲಿ ಅವನಿಗೆ ಒಳ್ಳೇ ಫಲವುಂಟಾಗುವದು. ೨೫ ಬಿಂದುಗಳಿಗಿಂತ ಕಡಿಮೆ ಬಿಂದುಗಳಿದ್ದರೆ ಅವನು ೭॥ ದಲ್ಲಿ ದುಃಖವನ್ನು ಅನುಭವಿಸಬೇಕಾಗುವದು. ದುಃಖದ ಪ್ರಮಾಣವು ಹೆಚ್ಚಾಗಿರುವದು. ಹೆಚ್ಚು ಕಡಿಮೆ ಬಿಂದುಗಳು ಬಿದ್ದಿದ್ದರೆ ಮಿಶ್ರ ಪರಿಣಾಮ ಸುಖ ದುಃಖದಲ್ಲಿಯೂ ತಾರತಮ್ಯವುಂಟಾಗುವದು. ಒಂದು ಮನೆಯಲ್ಲಿ ಕಡಿಮೆ ಬಿಂದುಗಳಿದ್ದರೆ, ಅಲ್ಲಿ ಶನಿಯ ಸಂಚಾರ ಹೆಚ್ಚು ಕಂಟಕಗಳನ್ನುಂಟುಮಾಡುವದು. ೩ ರಾಶಿಗಳಲ್ಲಿ ಯಾವ ರಾಶಿಯಲ್ಲಿ ಹೆಚ್ಚು ಬಿಂದುಗಳಿರುವವೋ ಆ ರಾಶಿಯಲ್ಲಿ ತಾಪತ್ರಯ ಕಡಿಮೆ. [illegible]೦ಕ್ಕಿಂತ ಹೆಚ್ಚು ಹೆಚ್ಚು ಬಿಂದುಗಳು ಬಿದ್ದಂತೆ ಸುಖಾಭಿವೃದ್ಧಿ, ತೊಂದರೆಗಳ ಅಂಶ ಕಡಿಮೆ, ಆದ್ದರಿಂದ ೭॥ ದ ಪ್ರಮಾಣದ ನಿರ್ಧಾರದಲ್ಲಿ ಅಷ್ಟಕವರ್ಗ ಪದ್ಧತಿಯ ವಿಧಿಯನ್ನು ತಿಳಿದುಕೊಳ್ಳುವದು ಅತ್ಯಾವಶ್ಯಕ. ಕಾರಣ ಜನ್ಮಕುಂಡಲಿಯನ್ನು ಹಾಕಿಕೊಂಡು ಎಲ್ಲ ಗ್ರಹಗಳ ಅಷ್ಟಕವರ್ಗವನ್ನು ತೆಗೆಯಬೇಕು.

### ಜನ್ಮ ಕುಂಡಲಿ

| | | | |
|---|---|---|---|
| ರವಿ, ಬುಧ | ಮಂ., ಗು., ರಾ. | | |
| ಶುಕ್ರ | | | |
| ಚಂದ್ರ | ಸಿಂಹಲಗ್ನ | | ಲಗ್ನ |
| | | ಕೇತು | ಶನಿ |

### ರವಿಯ ಅಷ್ಟಕವರ್ಗ

ರವಿಯಿಂದ ೧–೨–೪–೭. ೮–೯–೧೦–೧೧ನೇ ಮನೆಗಳಲ್ಲಿ ಬಿಂದುಗಳನ್ನಿಡಬೇಕು.

ಇದರಂತೆ ಚಂದ್ರನಿಂದ ೩–೬–೧೦–೧೧ ರಲ್ಲಿ ಮಂಗಳನಿಂದ ೧–೨–೪–೭–೮–೯–೧೦–೧೧ ರಲ್ಲಿ ಬಿಂದುಗಳು ಬರುವವು. ಬುಧನಿಂದ ೩–೫–೬–೯–೧೦·೧೧ ನೇ ಮನೆಯಲ್ಲಿ ಬಿಂದುಗಳನ್ನಿಡಬೇಕು. ಗುರುವಿನಿಂದ ೫–೬–೯–೧೧ ರಲ್ಲಿ ಬಿಂದುಗಳು, ಶುಕ್ರನಿಂದ ೬–೭–೧೨ ರಲ್ಲಿ ಬರುವವು. ಅಂತೂ ರವಿಯ ಅಷ್ಟಕವರ್ಗದಲ್ಲಿ ೪೮ ಬಿಂದುಗಳು ಬಿದ್ದಿರುವವು. ೪ ಕ್ಕಿಂತ ಹೆಚ್ಚು ಬಿಂದುಗಳಿರುವ ರಾಶಿಯಲ್ಲಿ ರವಿಯು ಸಂಚಾರ ಹಿತಕರ.

| | | | |
|---|---|---|---|
| ೩ | ೩ | ೪ | ೪ |
| ೩ | | | ೫ |
| ೫ | | | ಲ ೩ |
| ೫ | ೫ | | ೩ |

## ಚಂದ್ರನ ಅಷ್ಟಕ ವರ್ಗ

ಚಂದ್ರನಿರುವ ಮನೆಯಿಂದ ೧-೩-೬--೭--೧೦-೧೧ ರಲ್ಲಿ ಬಿಂದುಗಳು ಬರುವವು. ಮಂಗಳನಿರುವ ಭವನದಿಂದ ಚಂದ್ರನ ಅಷ್ಟಕ ವರ್ಗದಲ್ಲಿ ೨--೩-೫--೬--೯--೧೦--೧೧ರಲ್ಲಿ ಬಿಂದುಗಳು, ಬುಧನಿಂದ ೧-೩-೪-೫-೭-೮-೧೦-೧೧ರಲ್ಲಿ ಒಂದೊಂದು ಬಿಂದುಗಳನ್ನಿಡಬೇಕು.

ಗುರುವಿನಿಂದ ೧-೨-೪-೮-೧೦-೧೧ರಲ್ಲಿ, ಶುಕ್ರನಿಂದ ೩-೪-೫-೭-೯-೧೦-೧೧ರಲ್ಲಿ ಬಿಂದುಗಳನ್ನು ಇಡಿರಿ. ಶನಿಯಿಂದ ೩-೬-೫-೬-೧೧ರಲ್ಲಿ ಲಗ್ನದಿಂದ ೩-೬-೧೦-೧೧ರಲ್ಲಿ ರವಿಯಿಂದ ೩-೬-೭-೮-೧೦-೧೧ ರಲ್ಲಿ ಬಿಂದುಗಳನ್ನಿಡಿರಿ.

ಚಂದ್ರನ ಅಷ್ಟಕ ವರ್ಗದಲ್ಲಿ ಬಿದ್ದ ಬಿಂದುಗಳು ಒಟ್ಟು ೪೯

| | | | |
|---|---|---|---|
| ೨ | ೨ | ೬ | ೫ |
| ೩ | | | ೪ |
| ೭ | | | ಲ ೩ |
| ೪ | ೪ | ೬ | |

ಚಂದ್ರನಿರುವ ಭವನದಲ್ಲಿ ೭ ಬಿಂದುಗಳು ಬಿದ್ದಿರುವವು. ಅವನಿಗೆ ಮಕರ, ತುಲಾ, ವೃಷಭಗಳಲ್ಲಿ ಚಂದ್ರನ ಸಂಚಾರ ೭/೮ ಹಿತಕಾರಿ.

## ಮಂಗಳನ ಅಷ್ಟಕ ವರ್ಗ

ಮಂಗಳನಿರುವ ಮನೆಯಿಂದ ೧-೨-೪-೭-೮-೧೦-೧೧ರಲ್ಲಿ ಬಿಂದುಗಳು ಬರುವವು. ಮಂಗಳನ ಅಷ್ಟಕ ವರ್ಗದಲ್ಲಿ ಬುಧನಿರುವ ಮನೆಯಿಂದ ೩-೫-೬-೧೧ ರಲ್ಲಿ, ಗುರುವಿನಿಂದ ೬-೧೦-೧೧-೧೨ ರಲ್ಲಿ, ಶುಕ್ರನಿಂದ ೬-೮

೧೧-೧೨, ಶನಿಯಿಂದ ೧-೪-೭-೮-೯-೧೦-೧೧ರಲ್ಲಿ, ಲಗ್ನದಿಂದ ೧-೩-೬-೧೦-೧೧ರಲ್ಲಿ, ರವಿಯಿಂದ ೩-೫-೬-೧೧ರಲ್ಲಿ, ಚಂದ್ರನಿಂದ ೩-೬-೧೧ರಲ್ಲಿ ಬಿಂದುಗಳು ಬರುವವು, ಒಟ್ಟು ೩೯ ಬಿಂದುಗಳು,

| | | | |
|---|---|---|---|
| ೩ | ೨ | ೫ | ೩ |
| ೨ | | | ೫ |
| ೬ | | | ಲ ೩ |
| ೩ | ೨ | ೨ | ೩ |

ಮಂಗಳನಿಗೆ ಮೂಲ ಕುಂಡಲಿಯಲ್ಲಿ ೧ ೪ ಬಲವಿರುವದು. ಆದರೂ ಅವನ ಸಂಚಾರ ಮಕರ, ವೃಷಭ, ಕರ್ಕಗಳಲ್ಲಿ ಹೆಚ್ಚು ಬಿಂದುಗಳು ಬಿದ್ದಿರುವದರಿಂದ ಹಿತಕರವಾಗುವದು.

## ಬುಧನ ಅಷ್ಟಕ ವರ್ಗ

ಬುಧನಿರುವ ಭವನದಿಂದ ೧-೩-೫-೬-೯-೧೦-೧೧-೧೨ರಲ್ಲಿ ಬಿಂದುಗಳು ಬರುವವು, ಗುರುವಿನಿಂದ ೬-೮-೧೧-೧೨ರಲ್ಲಿ ಬಿಂದುಗಳು,

| | | | |
|---|---|---|---|
| ೫ | ೪ | ೫ | ೪ |
| ೬ | | | |
| ೪ | | | ಲ ೪ |
| ೪ | ೬ | ೪ | ೪ |

ಶುಕ್ರನಿಂದ ೧--೨--೩--೪--೫--೮--೯--೧೧ರಲ್ಲಿ ಬಿಂದುಗಳನ್ನು ಹಾಕಬೇಕು.

ಶನಿಯಿಂದ ೧-೨-೪-೭-೮-೯-೧೧ರಲ್ಲಿ, ರವಿಯಿಂದ ೫-೬-೯-೧೧-೧೨ ರಲ್ಲಿ, ಲಗ್ನದಿಂದ ೧-೨-೪-೬-೮-೧೦-೧೧ರಲ್ಲಿ, ಚಂದ್ರನಿಂದ ೨-೪-೬-೮-೧೦ ೧೧ರಲ್ಲಿ, ಮಂಗಳನಿಂದ ೧-೨-೪-೭-೮-೯-೧೦-೧೧ರಲ್ಲಿ ಬಿಂದುಗಳು ಬರುವವು.

## ಬುಧನ ಅಷ್ಟಕ ವರ್ಗ

ಬುಧನಿಂದ ೧-೩-೫-೬-೯_೧೦-೧೨ರಲ್ಲಿ ಬಿಂದುಗಳು.

ಗುರುವಿನಿಂದ ೬-೮-೧೧-೧೨ರಲ್ಲಿ, ಶುಕ್ರನಿಂದ ೧-೨-೩-೪-೫-೮-೯-೧೧ ರಲ್ಲಿ, ಶನಿಯಿಂದ ೧-೨-೪-೭-೮_೯-೧೦-೧೧ರಲ್ಲಿ, ಲಗ್ನದಿಂದ ೧-೨-೪-೬-೮ ೧೦_೧೧ರಲ್ಲಿ, ಚಂದ್ರನಿಂದ ೨-೪-೬-೮-೧೦-೧೧ರಲ್ಲಿ, ಮಂಗಳನಿಂದ ೧-೨-೪-೭-೮-೯-೧೦-೧೧ ಒಟ್ಟು ೫೪.

ಬುಧ ಇರುವಲ್ಲಿ ೫ ಬಿಂದುಗಳು. ೫/೮ ಬಲ ಬುಧನಿಗಿರುವದು. ವೃಶ್ಚಿಕ ಕುಂಭಗಳಲ್ಲಿ ಬುಧನ ಸಂಚಾರ ವಿಶೇಷ ಹಿತಕರ.

## ಗುರುವಿನ ಅಷ್ಟಕ ವರ್ಗ

ಗುರುವಿನಿಂದ ೧-೨-೩-೪-೭-೮-೧೦-೧೧ರಲ್ಲಿ ಬಿಂದುಗಳು ಬರುವವು, ಗುರುವಿನ ಅಷ್ಟಕ ವರ್ಗದಲ್ಲಿ ಶುಕ್ರನಿರುವ ಮನೆಯಿಂದ ೨-೫-೬-೯-೧೦-೧೧ ರಲ್ಲಿ, ಶನಿಯಿಂದ ೩-೫-೬_೧೨ರಲ್ಲಿ, ಲಗ್ನದಿಂದ ೧-೨-೪-೫-೬-೭-೯-೧೦-೧೧ರಲ್ಲಿ ಬರುವವು.

| | | | |
|---|---|---|---|
| ೩ | ೫ | ೫ | ೫ |
| ೫ | ಸಿಂಹ ಲಗ್ನ | | |
| ೬ | | | ೮ ೩ |
| ೪ | ೮ | ೪ | ೩ |

ರವಿಯಿಂದ ೧, ೨, ೩, ೪, ೭, ೮, ೯, ೧೦, ೧೧ರಲ್ಲಿ, ಮಂಗಳನಿಂದ ೧-೨, ೪, ೭, ೮, ೯, ೧೦, ೧೧ರಲ್ಲಿ, ಬುಧನಿಂದ ೧, ೨, ೪, ೭, ೮, ೧೦, ೧೧ರಲ್ಲಿ ಒಟ್ಟು ೫೬ ಬಿಂದುಗಳು.

ಗುರು ಇರುವಲ್ಲಿ ೫ ಬಿಂದುಗಳು ಇರುವವು. ಗುರುವಿಗೆ ೫/೮ ಬಲವಿರುವದು. ವೃಶ್ಚಿಕಕ್ಕೆ ಗುರು ಬಂದಾಗ ಅತ್ಯುತ್ತಮ ಫಲ. ಅಲ್ಲಿ ಹೆಚ್ಚು ಬಿಂದುಗಳಿರುವವು.

### ಶುಕ್ರನ ಅಷ್ಟಕ ವರ್ಗ

ಶುಕ್ರನಿಂದ ೧, ೨, ೩, ೪, ೫, ೮, ೯, ೧೦, ೧೧ ರಲ್ಲಿ ಬಿಂದುಗಳು ಬರುವವು. ಶನಿಯಿಂದ ೩, ೪, ೫, ೮, ೯, ೧೦, ೧೧ ರಲ್ಲಿ ಬಿಂದುಗಳು ಬರುವವು. ಲಗ್ನದಿಂದ ೧, ೨, ೩, ೪, ೫, ೮, ೯, ೧೧ರಲ್ಲಿ ಬಿಂದುಗಳು ಬರುವವು. ರವಿಯಿಂದ ೮, ೧೧, ೧೨ರಲ್ಲಿ ಬರುವವು ಚಂದ್ರನಿಂದ ೧, ೨, ೩, ೪, ೫, ೮, ೯, ೧೧, ೧೨ರಲ್ಲಿ, ಮಂಗಳನಿಂದ ೩, ೪, ೬, ೯, ೧೧, ೧೨ ರಲ್ಲಿ ಬರುವವು ಬುಧನಿಂದ ೩, ೫, ೬, ೯, ೧೧ರಲ್ಲಿ, ಗುರುವಿನಿಂದ ೫, ೮, ೯, ೧೦ ೧೧ ರಲ್ಲಿ ಬರುವವು. ಒಟ್ಟು ೫೨ ಬಿಂದುಗಳು.

ಶುಕ್ರನ ಅಷ್ಟಕ ವರ್ಗದಲ್ಲಿ ಪ್ರತಿಯೊಂದು ಭಾವದಲ್ಲಿ ಬಿದ್ದ ಬಿಂದುಗಳು ಶುಕ್ರನಿರುವ ಮನೆಯಲ್ಲಿ ೫ ಬಿಂದುಗಳಿರುವವು ಆದ್ದರಿಂದ ಅವನಿಗೆ ಜನ್ಮ ಕುಂಡಲಿಯಲ್ಲಿ ೫/೮ ಬಲವಿರುವದದು.

### ಶನಿಯ ಅಷ್ಟಕ ವರ್ಗ

ಶನಯಿಂತ ೩, ೫, ೬, ೧೧ ರಲ್ಲಿ ಬಿಂದುಗಳನ್ನಿಡಿರಿ. ಲಗ್ನದಿಂದ ೧, ೩, ೪, ೬, ೧೦ ೧೧ರಲ್ಲಿ ಬಿಂದಃಗಳು ಬರುವವು. ರವಿಯಿಂದ ೧, ೨, ೪, ೭ ೮, ೧೦, ೧೧.

| | | | |
|---|---|---|---|
| ೪ | ೪ | ೪ | ೪ |
| ೫ | ಸಿಂಹ ಲಗ್ನ | | ೩ |
| ೫ | | | ಲ೪ |
| ೬ | ೬ | ೩ | |

ರಲ್ಲಿ, ಚಂದ್ರನಿಂದ ೩-೬-೧೧ ರಲ್ಲಿ, ಮಂಗಳನಿಂದ ೩-೫-೬-೧೦-೧೧-೧೨ ರಲ್ಲಿ, ಬುಧನಿಂದ ೬-೮-೯-೧೦-೧೧-೧೨ ರಲ್ಲಿ, ಗುರುವಿನಿಂದ ೫-೬-೧೧-೧೨ ರಲ್ಲಿ ಶುಕ್ರನಿಂದ ೬-೧೧-೧೨ ರಲ್ಲಿ ಒಟ್ಟು ೩೯ ಬಿಂದುಗಳು.

| | | | |
|---|---|---|---|
| ೪ | ೧ | ೧ | ೪ |
| ೮೪ | ಸಿಂಹ ಲಗ್ನ | | ೨ |
| ೬ | | | ೪ |
| ೩ | ೪ | ೩ | ೩ |

ಶನಿಗೆ ೩/೮ ಬಲವಿರುವದು, ಮಕರದಲ್ಲಿ ಶನಿ ಸಂಚಾರ ಒಳ್ಳೆಯದು, ಎಲ್ಲ ಭವನಗಳಲ್ಲಿ ಬಿದ್ದ ಬಿಂದುಗಳನ್ನು ಕೂಡಿಸಿ ಇಡಲು ಸರ್ವಾಷ್ಟಕ ವರ್ಗ ಸಿದ್ಧವಾಗುವುದು.

## ಸರ್ವಾಷ್ಟಕ ವರ್ಗ

ಒಟ್ಟು ೩೩೭ ಬಿಂದುಗಳು.

ಚಂದ್ರನು ಮೂಲ ಕುಂಡಲಿಯಲ್ಲಿ ಮಕರ ರಾಶಿಯಲ್ಲಿರುವನು. ಧನು ಮಕರ ಕುಂಭ ರಾಶಿಗಳಲ್ಲಿ ಶನಿಯು ಸಂಚಾರ ೭॥ ಇರುವದು. ಮಕರ ರಾಶಿ

| | | | |
|---|---|---|---|
| ೨೪ | ೨೧ | ೩೦ | ೨೯ |
| ೨೮ | ಸಿಂಹಲಗ್ನ | | ೨೮ |
| ೩೯ | | | ೨೪ |
| ೨೯ | ೩೫ | ೨೭ | ೨೩ |

ಯಲ್ಲಿ ೩೯ ಬಿಂದುಗಳಿರುವದರಿಂದ ಹೆಚ್ಚಾಗಿ ಅದು ಶುಭಫಲವನ್ನೇ ಕೊಡು ವದು. ಧನೂದಲ್ಲಿ, ಕುಂಭದಲ್ಲಿ ೩೦ಕ್ಕಿಂತ ಕಡಿಮೆ ಬಿಂದುಗಳಿರುವದರಿಂದ ಕೊಂಚ ಪೀಡೆಯಾಗಬಹುದು. ಆದರೂ ಮಕರ ರಾಶಿಯಲ್ಲಿ ಹುಟ್ಟಿದವರಿಗೆ ಬಾಧ ಪೀಡೆ ಕಡಿಮೆ. ಮಕರರಾಶಿ ಶನಿಗೆ ಸ್ವಗೃಹ. ಅಲ್ಲಿ ಹುಟ್ಟಿದವರನ್ನು ಅವನೂ ಆತ್ಮೀಯ ಭಾವದಿಂದ ನೋಡುವನು.

ಅಷ್ಟಕ ವರ್ಗದ ವಿಧಾಗಗಳು ಇನ್ನೂ ಹಲವು ಇರುವವು. ಪ್ರತಿ- ಯೊಬ್ಬರ ಅಷ್ಟಕ ವರ್ಗದಲ್ಲಿ ತ್ರಿಕೋಣ ಶೋಧನ, ಏಕಾಧಿಪತ್ಯ ಶೋಧನ ವಿಧಿಗಳನ್ನು ಮಾಡಿ, ಶೋಧ್ಯಾವಶಿಷ್ಟವನ್ನು ತೆಗೆಯಬೇಕು. ರಾಶಿ ಗುಣಾಕಾರ ಗ್ರಹ ಗುಣಾಕಾರ ಮಾಡಿ, ಶೋಧ್ಯಪಿಂಡವನ್ನು ತೆಗೆಯಬೇಕು. ತರುವಾಯ ಶನಿ ಪೀಡಾದಾಯಕ ನಕ್ಷತ್ರ ಶನಿ ಸಂಚಾರ ತಿಳಿಯುವದು, ಆ ನಕ್ಷತ್ರ ಶನಿ ಸಂಚಾರ ನಿಮಗೆ ಕೈ ತೋರಿಸುವದೋ ಇಲ್ಲವೋ ತಿಳಿಯುವದು.

-o-

# ೮. ಗ್ರಹಗಳ ಮೇಲಿಂದ ಶನಿಯ ಪರಿಭ್ರಮಣ

ಸಾಡೇಸಾತಿಯಲ್ಲಿ ಶನಿಯು ಯಾವ ಸ್ಥಾನದ ಮೇಲಿಂದ ಹಾಗೂ ಯಾವ ರಾಶಿಯ ಮೇಲಿಂದ ಪರಿಭ್ರಮಿಸುತ್ತಾನೆ ಎಂಬುದು ಎಷ್ಟು ಮಹತ್ವದ ವಿಷಯವೋ ಯಾವ ಗ್ರಹದ ಮೇಲಿಂದ ಪರಿಭ್ರಮಿಸುತ್ತಾನೆ ಎಂಬುದೂ ಅಷ್ಟೇ ಮಹತ್ವದ ಸಂಗತಿಯು. ಕೆಲವೊಂದು ಸಮಯ ಸಾಡೇಸಾತಿಯಲ್ಲಿ ಶನಿಯು ಯಾವ ಗ್ರಹದ ಮೇಲಿಂದಲೂ ಪರಿಭ್ರಮಿಸದೆ ಒಬ್ಬನೇ ಪರಿಭ್ರಮಿಸಬಹುದು, ಆಗ ಮಾತ್ರ ಸಾಡೇಸಾತಿಯ ಫಲವು ದೊರೆಯುತ್ತದೆ. ಉಳಿದ ಗ್ರಹಗಳ ಮೇಲಿಂದ ಪರಿಭ್ರಮಿಸುತ್ತಿದ್ದರೆ ಆಯಾ ಗ್ರಹಗಳ ಪರಿಣಾಮವೂ ಕೂಡ ಆಗುತ್ತದೆ. ಸಾಡೇಸಾತಿಯಲ್ಲಿ ಶನಿಯು ಪರಿಭ್ರಮಿಸುವಾಗ ಮೂಲ ಗ್ರಹಗಳೊಂದಿಗೆ ಸಮಸಪ್ತಕ ಮೊದಲಾದ ಯೋಗ ಮಾಡುತ್ತಿದ್ದರೂ ಕೂಡ ಭಿನ್ನ ಭಿನ್ನ ಪರಿಣಾಮವಾಗುತ್ತದೆ. ಚಂದ್ರನ ಮೇಲಿಂದ ಶನಿಯು ಪರಿಭ್ರಮಿಸುವಾಗ ಸಾಡೇಸಾತಿಯಂತೂ ಇದ್ದೇ ಇರುತ್ತದೆ. ಆದರೆ ಉಳಿದ ಗ್ರಹಗಳ ಮೇಲಿಂದ ಶನಿಯ ಪರಿಭ್ರಮಣವು ಸಾಡೇಸಾತಿಯ ಪ್ರಭಾವವನ್ನು ಕಡಿಮೆ ಮಾಡುತ್ತದೆ, ಅಥವಾ ಸಾಡೇಸಾತಿಯ ಪರಿಣಾಮವನ್ನು ಹೆಚ್ಚಿಸುತ್ತದೆ.

ಸಾಡೇಸಾತಿಯ ಭೀಕರತೆ ಅಥವಾ ಸೌಮ್ಯತೆಗೆ ಉಳಿದ ಗ್ರಹಗಳ ಪ್ರಭಾವವೂ ಕೆಲವೊಂದು ಸಮಯದಲ್ಲಿ ಕಾರಣೀಭೂತವಾಗುತ್ತದೆ. ಉದಾ — ಕನ್ಯಾ ರಾಶಿಯುಳ್ಳ ( ಜನ್ಮರಾಶಿ ಕನ್ಯಾ ) ಮೂವರು ಕುಂಡಲಿಗಳಿವೆ ಅಂತಾ ಕಲ್ಪಿಸಿರಿ. ಮೊದಲನೆಯವನ ಜಾತಕದಲ್ಲಿ ರವಿ ಅಥವಾ ಮಂಗಳರು ತುಲಾದಲ್ಲಿ ಇದ್ದಾರೆಂದು ತಿಳಿಯಿರಿ. ಎರಡನೆಯವನ ಜಾತಕದಲ್ಲಿ ತುಲಾದಲ್ಲಿ ಯಾವ ಗ್ರಹವೂ ಇಲ್ಲವೆಂದು ತಿಳಿಯಿರಿ. ಮೂರನೆಯವನ ಜಾತಕದ ತುಲಾದಲ್ಲಿ ಬುಧ ಅಥವಾ ಶುಕ್ರ ಇಲ್ಲವೆ ಬುಧ ಶುಕ್ರರು ಇದ್ದಾರೆಂದು ಕಲ್ಪಿಸಿರಿ.

ಮೊದಲನೆಯವನಿಗೆ ಸಾಡೇಸಾತಿಯ ಭೀಕರತೆಯು ಬಹಳ ಇರುತ್ತದೆ. ಮೊದಲೇ ಸಾಡೇಸಾತಿಯು ( ಎರಡನೇ ಶನಿಯು ) ಅದರಲ್ಲಿಯೂ ರವಿ-ಮಂಗಳರ ಮೇಲಿಂದ ಶನಿಯ ಪರಿಭ್ರಮಣದ ಪರಿಣಾಮ ಬಹಳೇ ಅಶುಭದಾಯಕವು.

ಎರಡನೆಯವನಿಗೆ ಸಾಡೇಸಾತಿಯ ಪರಿಣಾಮ ಅಷ್ಟೊಂದು ಆಗುವದಿಲ್ಲ. ಶನಿಯು ಎರಡನೆಯವನಾದ್ದರಿಂದ ವಾಯು ರಾಶಿಯಲ್ಲಿ ಪರಿಭ್ರಮಿಸುವದರಿಂದ ಸಾಡೇಸಾತಿಯು ಪ್ರಖರವಾಗುವದಿಲ್ಲ.

ಮೂರನೆಯವನಿಗೆ ಸಾಡೇಸಾತಿಯ ದುಷ್ಟ ಪರಿಣಾಮವಾಗದೆ ಶುಭ ಫಲಗಳೇ ಹೆಚ್ಚಾಗಿ ಸಿಗುತ್ತವೆ (ಎರಡನೇ ಶನಿ ಇದ್ದರೂ). ಏಕೆಂದರೆ ಶನಿಯ ಪರಿಭ್ರಮಣವು ವಾಯು ರಾಶಿಯಲ್ಲಿ ಹಾಗೂ ಉಚ್ಚ ರಾಶಿಯಲ್ಲಿ ಮತ್ತು ಬುಧ ಶುಕ್ರರ ಮೇಲಿಂದಲೂ ಆಗುವದರಿಂದ ಶುಭ ಫಲಗಳೇ ಹೆಚ್ಚಾಗಿ ಸಿಗುತ್ತವೆ. ಇದರಂತೆ ಮೂಲಗ್ರಹಗಳೊಂದಿಗೆ ಶನಿಯು ಯೋಗ ಮಾಡುತ್ತಿರುವದನ್ನು ಪರಿಶೀಲಿಸಬೇಕು.

ಮೂಲಗ್ರಹದ ಮೇಲಿಂದ ಶನಿಯ ಪರಿಭ್ರಮಣವು ಹೇಗೆ ಆಗುತ್ತದೆ ಎಂಬುದನ್ನು ಕೆಳಗೆ ಕೊಡಲಾಗಿದೆ—

(೧) ರವಿ, ಮಂಗಳ, ಮತ್ತು ಅಗ್ನಿ ಹಾಗೂ ಜಲರಾಶಿಯಲ್ಲಿದ್ದ ರಾಹು ಇವರ ಮೇಲಿಂದ ಶನಿಯು ಪರಿಭ್ರಮಿಸುವಾಗ ಅಶುಭ ಫಲಗಳೇ ಹೆಚ್ಚಾಗಿ ಸಂಭವಿಸುತ್ತವೆ. ಸಾಡೇಸಾತಿಯ ಕಾಲದಲ್ಲಿ ಅಂಥ ಈ ಪರಿಣಾಮವು ಬಹಳೇ ಅಶುಭದಾಯಕವು ಇರುತ್ತದೆ.

(೨) ಗುರು–ಚಂದ್ರರ ಮೇಲಿಂದ ಶನಿಯ ಪರಿಭ್ರಮಣವು ಅಷ್ಟೊಂದು ಅಶುಭವೂ ಹಾಗೂ ಶುಭವೂ ಆಗದೆ ಮಧ್ಯಮ ರೀತಿಯಿಂದ ಇರುತ್ತದೆ.

(೩) ಬುಧ, ಶುಕ್ರ, ಮೂಲ ಶನಿ, ಹಾಗೂ ಭೂರಾಶಿ ಮತ್ತು ವಾಯು ರಾಶಿಯಲ್ಲಿರುವ ರಾಹು ಇವರ ಮೇಲಿಂದ ಪರಿಭ್ರಮಿಸುವಾಗ ಶನಿಯು ಶುಭಫಲಗಳೇ ಹೆಚ್ಚಾಗಿ ಸಿಗುತ್ತವೆ. ಸಾಡೇಸಾತಿಯಲ್ಲಿ ಕೂಡ ಭೀಕರತೆಯ ಪರಿಣಾಮವಾಗದೇ ಶುಭಫಲಗಳೇ ಹೆಚ್ಚಾಗಿ ಸಿಗುತ್ತವೆ.

ಇನ್ನು ಎರಡನೆಯ ವಿಷಯವಾಗಿ ಶನಿಯ ಪರಿಭ್ರಮಣವು ಗೋಚರಿಯಿಂದ ಸಾಡೇಸಾತಿಯ ಕಾಲಕ್ಕೆ ಯಾವುದೆ ಗ್ರಹದ ಮೇಲಿಂದ ಆದರೂ ಮೂಲ ಕುಂಡಲಿಯಲ್ಲಿಯ ಆಯಾ ಗ್ರಹದ ಬಲಾಬಲಗಳನ್ನು ನೋಡಲು ಮರೆಯಬಾರದು. ಒಂದು ವೇಳೆ ಮೂಲ ಕುಂಡಲಿಯಲ್ಲಿಯ ಗ್ರಹಗಳು ದುರ್ಬಲವಾಗಿದ್ದರೆ, ಭೀಕರತೆಯ ಪರಿಣಾಮವು ಹೆಚ್ಚಾಗಿರುತ್ತದೆ. ಮೂಲ ಕುಂಡಲಿಯಲ್ಲಿ ಶನಿಯು ಬಲವಂತನೂ ಯೋಗಕಾರನೂ ಆಗಿದ್ದರೆ ಸಾಡೇಸಾತಿ

ಯಲ್ಲಿ ಪರಿಣಾಮ ಸಹ ಆಗುವದಿಲ್ಲ. ಆದುದರಿಂದ ಒಮ್ಮೆಲೇ ನಿಶ್ಚಯಕ್ಕೆ ಬರದೆ ಜಾತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಗ್ರಹಗಳ ಬಲಾಬಲವನ್ನು ತೂಗಿನೋಡಬೇಕು.

ಮೂರನೆಯದಾಗಿ ಸಾಡೇಸಾತಿಯ ಕಾಲಕ್ಕೆ ಶನಿಯ ಪರಿಭ್ರಮಣವು ಯಾವ ಗ್ರಹದ ಮೇಲಿಂದ ಯಾವ ಸ್ಥಾನ (ಭಾವ)ದ ಮೇಲಿಂದ ಆಗುತ್ತದೆ ಎಂಬುದನ್ನೂ ನೋಡಬೇಕು. ಉದಾ— ಶನಿಯ ಪ್ರರಿಭ್ರಮಣವು ರವಿಯ ಮೇಲಿಂದ ಆಗುತ್ತದೆ ಅಂತಾ ತಿಳಿದರೆ ರವಿಯು ನೈಸರ್ಗಿಕ ಕಾರಕತ್ವ ಯಾವುದು ? ಮೂಲ ಕುಂಡಲಿಯಲ್ಲಿ ರವಿಯ ಬಲಾಬಲವೆಷ್ಟು ? ಯಾವ ಸ್ಥಾನದಲ್ಲಿ ರವಿ ಇದ್ದಾನೋ ಆ ಲಗ್ನಕ್ಕೆ ರವಿಯು ಯೋಗಕಾರಕನೋ? ಯಾವ ಸ್ಥಾನದ ರವಿಯ ಅಧಿಪತಿಯು (ಭಾವೇಶ) ಹೀಗೆ ಎಲ್ಲವನ್ನು ವಿಚಾರಿಸಿಯೇ ಒಂದು ನಿರ್ದಿಷ್ಟಕ್ಕೆ ಬರಬೇಕಾಗುತ್ತದೆ.

ಶನಿಯ ಪರಿಭ್ರಮಣವು ಸಾಡೇಸಾತಿಯ ಕಾಲಕ್ಕೆ ಯಾವ ಯಾವ ಗ್ರಹಗಳ ಮೇಲಿಂದ ಆದರೆ ಯಾವ ಪರಿಣಾಮವಾಗುತ್ತದೆ ಎಂಬುದನ್ನು ಕೆಳಗೆ ಕೊಡಲಾಗಿದೆ.

**ರವಿ:** ಶನಿಯ ಪರಿಭ್ರಮಣವು ರವಿಯ ಮೇಲಿಂದ ಆಗುತ್ತಿದ್ದರೆ-ತಂದೆಯ ಸುಖಕ್ಕೆ ಹಾನಿದಾಯಕವು. ರಾಜಕೀಯ, ಹಾಗೂ ಸಾಮಾಜಿಕ ಕೆಲಸದಲ್ಲಿ ಹಾನಿದಾಯಕವು. ನೌಕರದಾರರಿಗೆ ಮೇಲಾಧಿಕಾರಿಗಳಿಂದ ತೊಂದರೆ, ಹಿಂಬಡತಿ ಹಾಗೂ ಕೆಲಸದಲ್ಲಿ ಅಪಯಶಸ್ಸು, ಡಾಕ್ಟರ ಹಾಗೂ ಇಂಜಿನಿಯರರಿಗೆ ವಿಶೇಷವಾಗಿ ಸಿವಿಲ ಇಂಜನಿಯರರಿಗೆ, ವಕೀಲ ಹಾಗೂ ನ್ಯಾಯಖಾತೆಯಲ್ಲಿರುವ ಜನರಿಗೆ ಹಾನಿದಾಯಕವು ಆಗುತ್ತದೆ.

**ಚಂದ್ರ:** ಚಂದ್ರನ ಮೇಲಿಂದ ಶನಿಯ ಪರಿಭ್ರಮಣ ಅಂದರೆ ಸಾಡೇ-ಸಾತಿಇದ್ದೇ ಇರುವುದರಿಂದ ಮಾನಸಿಕ ಸ್ಥಿತಿಯು ಚಿಂತಾಜನಕವಾಗಿರುತ್ತದೆ. ತಲೆಯ ಮೇಲೆ ಪರಿಣಾಮವಾಗಿ ಹುಚ್ಚು ಹಿಡಿಯುವ ಸಂಭವವಿರುತ್ತದೆ. ಲಗ್ನಾಧಿಪನು ಬಲಹೀನನಿದ್ದರಂತೂ ಮನಸ್ಸಿನ ಮೇಲೆ ಆಘಾತವಾಗುತ್ತದೆ. ಮಾಟ, ಭೂತ, ಪಿಶಾಚಿ ಮೊದಲಾದ ದುಷ್ಕೃತ್ಯಗಳಿಂದ ಹಾನಿದಾಯಕವು.

ಮಾತ್ಯ ಸೌಖ್ಯಕ್ಕೆ ಹಾನಿದಾಯಕವು, ಲಂಚಗುಳಿತನದಿಂದ ಶಿಕ್ಷೆ,ದಂಡ, ಅಪಮಾನವಾಗುವ ಸಂಭವವಿರುತ್ತದೆ. ನಾಟಕ-ಸಿನಿಮಾದಲ್ಲಿ ಕೆಲಸ ಮಾಡುವವರಿಗೂ, ಗಮಕಿಗಳಿಗೂ(ಹಾಡುಗಾರಿಕೆಯವರಿಗೆ)ಭಾಷಣಕಾರರಿಗೂ ವಿಶೇಷವಾಗಿ ಹಾನಿದಾಯಕವಾಗುತ್ತದೆ. ಒಟ್ಟಿನಲ್ಲಿ ಶನಿಯ ಭ್ರಮಣವು ಚಂದ್ರನ ಮೇಲಿಂದ ಆಗುವಾಗ ಆರ್ಥಿಕ ದೃಷ್ಟಿಯಿಂದ ಹಾನಿಯಾಗದೆ ಅಪಮಾನ ಮೊದಲಾದ ಮಾನಸಿಕ ದೃಷ್ಟಿಯಿಂದ ಹಾನಿದಾಯಕವಿರುತ್ತದೆ,

ಮಂಗಳ : ಸಾಡೇಸಾತಿಯ ಸಮಯದಲ್ಲಿ ಶನಿಯ ಪರಿಭ್ರಮಣವು ಮಂಗಳನ ಮೇಲಿಂದ ಆಗುತ್ತಿದ್ದರೆ ಆಕಸ್ಮಿಕವಾಗಿ ಗಂಡಾಂತರಗಳನ್ನು ಎದುರಿಸಬೇಕಾಗುತ್ತದೆ. ಸೋದರರಿಂದ ( ಭಾತ್ರ-ಭಾಗಾದಿಯರಿಂದ ) ಹಾನಿದಾಯಕವೂ ಚೋರಭಯ, ಅಗ್ನಿಭಯ ಇಲ್ಲವೆ ಗುಪ್ತಶತ್ರುಗಳಿಂದ ಹಾನಿದಾಯಕವೂ ಆಕಸ್ಮಿಕವಾಗಿ ಮನೆ ಇಲ್ಲವೆ ಕಟ್ಟಡಗಳು ಕುಸಿದಾಗಲಿ ಬಿದ್ದಾಗಲಿ ಮಹಾಪೂರ ಮೊದಲಾದವುಗಳಿಂದ ಆಕಸ್ಮಿಕ ಹಾನಿಯಾಗುತ್ತದೆ. ಸ್ಕೂಟರ್, ಕಾರ, ಲಾರಿ, ಸಾಯಿಕಲ್ ಮೊದಲಾದ ವಾಹನಗಳಿಂದ ಅಪಘಾತ ಅಥವಾ ಎತ್ತರದಿಂದ ಬೀಳುವಿಕೆಯಾಗಲಿ ಸಂಭವಿಸುತ್ತದೆ. ವಿಶೇಷವಾಗಿ ಡಾಕ್ಟರ್ಸ್, ಇಂಜನಿಯರ್ಸ್ ಅದರಲ್ಲಿಯೂ ಮೆಕ್ಯಾನಿಕಲ್, ಇಲೆಕ್ಟ್ರಿಕಲ್ ಇಂಜನೀಯರ್‌ರಿಗೂ ಪೋಲೀಸ, ಮಿಲಿಟರಿ, ವಿದ್ಯುತ್ ಖಾತೆಯಲ್ಲಿಯ ಕೆಲಸಗಾರರಿಗೂ ವೈಮಾನಿಕ ಕೆಲಸಗಾರರಿಗೂ ತಾಂತ್ರಿಕ ಕೆಲಸಗಾರರಿಗೂ ವಿಶೇಷವಾಗಿ ಹಾನಿದಾಯಕವಿರುತ್ತದೆ. ಗಿರಣಿ ಕೆಲಸಗಾರರಿಗೂ, ಸಟ್ಟಾ, ಲಾಟರೀ ವ್ಯಾಪಾರಸ್ಥರಿಗೂ, ಲೇಥ್ ಮೊದಲಾದ ವರ್ಕಶಾಪ, ಗ್ಯಾರೇಜ ಮೊದಲಾದವುಗಳ ಮಾಲಕರಿಗೂ ಮಂಗಳನ ಮೇಲೆ ಶನಿಯ ಪರಿಭ್ರಮಣವು ಹಾನಿದಾಯಕವಿರುತ್ತದೆ.

ಯಾವದೇ ದೇಶದಲ್ಲಾಗಲಿ ಪಟ್ಟಣದಲ್ಲಿ ಆಗಲಿ ಈ ಯೋಗ ಆಗುತ್ತಿದ್ದರೆ ಆ ದೇಶದಲ್ಲಿ ಅಥವಾ ಪಟ್ಟಣದಲ್ಲಿ ಜ್ವಾಲಾಮುಖಿ,ಭೂಕಂಪದ ಮತ್ತು ಯುದ್ಧದ ಭಯವಿರುತ್ತದೆ.

ಬುಧ : ಬುಧನ ಮೇಲಿಂದ ಶನಿಯ ಪರಿಭ್ರಮಣವು ಯಾವ ಕಾಲಕ್ಕೂ ಶುಭದಾಯಕವು. ಸಾಡೇಸಾತಿಯಲ್ಲಿ ಸಹ ಅಶುಭ ಘಟನೆಗಳು

ಜರುಗದೆ ಶುಭ ಫಲಗಳೇ ಹೆಚ್ಚಾಗಿ ದೊರೆಯುತ್ತವೆ. ಆದರೆ ಬುಧನು ಹೆಚ್ಚಾಗಿ ರವಿಯೊಂದಿಗೆ ಇರುವುದರಿಂದ ಮಿಶ್ರ ಫಲಗಳು ದೊರಕುತ್ತವೆ. ಬುಧನು ನೀಚ, ಅಸ್ತ, ಶತ್ರುಕ್ಷೇತ್ರಿ, ಅಥವಾ ರವಿ, ಮಂಗಳ, ಚಂದ್ರ ಇವರೊಂದಿಗೆ ಹೀಗೆ ದುರ್ಬಲನಾಗಿದ್ದರೆ ಕೆಳಗೆ ಕಾಣಿಸಿದಂತೆ ಅಶುಭ ಫಲಗಳು ದೊರೆಯುತ್ತವೆ. ಲೇಖಕ, ಗ್ರಂಥಕಾರ, ಪ್ರಕಾಶಕ, ಸಂಪಾದಕ, ಸಾಹಿತಿ, ಮುದ್ರಕ ಮೊದಲಾದ ಲೇಖನೀ ವ್ಯವಸಾಯದವರಿಗೂ, ಪೋಸ್ಟಿನಲ್ಲಿ ಕೆಲಸ ಮಾಡುವವರಿಗೂ ಭಾಷಣಕಾರರಿಗೂ ಕಿರಾಣಿ-ಕಾಳುಕಡಿ ಮೊದಲಾದ ಎಲ್ಲ ತರಹದ ವ್ಯಾಪಾರಸ್ಥರಿಗೂ ಬ್ಯಾಂಕ್ ಮೊದಲಾದ ಹಣಕಾಸಿನ ವ್ಯವಹಾರದಲ್ಲಿ ಕೆಲಸ ಮಾಡುವವರಿಗೂ ವಿಶೇಷವಾಗಿ ಹಾನಿದಾಯಕವಾಗುತ್ತದೆ. ಮೂಲ ಕುಂಡಲಿಯಲ್ಲಿ ಬುಧನು ಬಲಾಢ್ಯನೂ ಯೋಗಕಾರಕನೂ ಇದ್ದರೆ ಶನಿಯ ಭ್ರಮಣವು ಹಾನಿದಾಯಕವಾಗದೆ ಹೆಚ್ಚು ಲಾಭದಾಯಕವಿರುತ್ತದೆ.

ಗುರು : ಶನಿಯ ಪರಿಭ್ರಮಣವು ಗುರುವಿನ ಮೇಲೆ ಆಗುತ್ತಿದ್ದರೆ ರವಿ-ಮಂಗಳರಷ್ಟು ಹಾನಿದಾಯಕವೂ ಬುಧ-ಶುಕ್ರರಷ್ಟು ಶುಭದಾಯಕವೂ ಆಗಿರದೆ ಮಿಶ್ರ ಫಲಗಳೇ ಹೆಚ್ಚಾಗಿ ಸಿಗುತ್ತವೆ. ಗುರುವು ಮೂಲ ಕುಂಡಲಿಯಲ್ಲಿ ನೀಚ, ವಕ್ರಿ, ಅಸ್ತಂಗತ, ಶತ್ರುಕ್ಷೇತ್ರಿ ಹೀಗೆ ದುರ್ಬಲನಿದ್ದರೆ ಅಥವಾ ರವಿ, ಮಂಗಳರೊಂದಿಗೆ ಇದ್ದರೆ ಮಾತ್ರ ಕೆಳಗೆ ಕಾಣಿಸಿದಂತೆ ಅಶುಭ ಫಲಗಳು ದೊರಕುತ್ತವೆ.

ಧಾರ್ಮಿಕ ಉಪದೇಶಕ ಅರ್ಚಕರಿಗೂ (ಪೂಜಾರಿ-ಭಟ್ಟ-ಆಚಾರ್ಯ) ಶಿಕ್ಷಣ ಖಾತೆಯಲ್ಲಿ ಕೆಲಸ ಮಾಡುವವರಿಗೂ, ಹೆಚ್ಚಾಗಿ ಶಿಕ್ಷಕರಿಗೆ, ಅದರಲ್ಲಿಯೂ ಹೆಡ್‌ಮಾಸ್ತರ, ಪ್ರಿನ್ಸಿಪಾಲರಿಗೂ, ನ್ಯಾಯಾಧೀಶರಿಗೂ, ಕಲೆಕ್ಟರ, ಗವ್ಹರ್ನರ, ರಾಷ್ಟ್ರಾಧ್ಯಕ್ಷ ಮೊದಲಾದ ವರಿಷ್ಠ ಅಧಿಕಾರಿಗಳಿಗೂ, ಮುನಿಸಿಪಲ್ ಕಾರ್ಪೋರೇಷನ್, ಚೇರಮನ್-ಅಧ್ಯಕ್ಷರಿಗೂ ಅಲ್ಲದೆ ಯಾವುದೇ ಸಂಘ ಸಂಸ್ಥೆಗಳ ಅಧ್ಯಕ್ಷರು, ವಿಶೇಷತಃ ಪಗಾರವಿಲ್ಲದೆ ಕೆಲಸ ಮಾಡುವ ಗೌರವ ಅಧಿಕಾರಿಗಳಿಗೂ ಹಾನಿದಾಯಕವಿರುತ್ತದೆ. ಮೂಲ ಕುಂಡಲಿಯಲ್ಲಿ ಗುರು ಬಲಾಢ್ಯನಿದ್ದು, ಯೋಗಕಾರಕನಿದ್ದರೆ ಶುಭಫಲಗಳೇ ಹೆಚ್ಚಾಗಿ ಸಿಗುತ್ತವೆ.

ಶುಕ್ರ: ಶುಕ್ರನ ಮೇಲಿನ ಶನಿಯ ಪರಿಭ್ರಮಣವು ಬಹಳೇ ಶುಭ ದಾಯಕವು. ಸಾಡೇಸಾತಿಯಲ್ಲಿ ಅಂಶಃ ಭೀಕರತೆಯು ಕಡಿಮೆಯಾಗಿ ಶುಭ ಫಲಗಳೇ ಹೆಚ್ಚಾಗಿ ದೊರೆಯುತ್ತವೆ. ಶುಕ್ರನು ನೀಚ,ಅಸ್ತ,ವಕ್ರಿ,ಶತ್ರುಕ್ಷೇತ್ರಿ ಹೀಗೆ ದುರ್ಬಲನಿದ್ದರೆ ಆ ಕುಂಡಲಿಗೆ ಯೋಗಕಾರಕನಿರದೇ ಇದ್ದರೆ ಕೆಳಗೆ ಕಾಣಿಸಿದಂತೆ ಅಶುಭ ಫಲಗಳು ದೊರೆಯುತ್ತದೆ.

ಪರಸ್ತ್ರೀ, ಪರಪುರುಷ, ಲಂಪಟ ಹಾಗೂ ಅನೇಕ ತರಹದ ಅಪವಾದ, ಮದ್ಯ–ಜೂಜುಗಳಿಂದ ಹಾನಿ. ವಿಶೇಷವಾಗಿ ಗಾಯಕ, ನರ್ತಕ, ವಾದ್ಯ ಬಾರಿಸುವವರೂ ಮೊದಲಾದ ಕಲಾಕಾರರಿಗೂ ಸರಾಫರಿಗೂ ವಿಲಾಸದ ವಸ್ತುಗಳ ವ್ಯಾಪಾರಸ್ಥರಿಗೂ ರೇಷ್ಮೆ–ಸುಗಂಧ ವ್ಯಾಪಾರಸ್ಥರಿಗೂ ಪ್ರಕಾಶಕ, ಸಾಹಿತಿಗಳಿಗೂ ಜ್ಯೋತಿಷಿಗಳಿಗೂ ಮಂತ್ರಿ ವರ್ಗದವರಿಗೂ ಸಾಮಾಜಿಕ ಕೆಲಸಗಾರರಿಗೂ ಸ್ವತಂತ್ರ ಉದ್ಯೋಗಸ್ಥರಿಗೂ ಹಾನಿದಾಯಕವಿರುತ್ತದೆ.

ಮೂಲ ಕುಂಡಲಿಯಲ್ಲಿ ಶುಕ್ರನು ಬಲಾಢ್ಯನಿದ್ದು, ಅವನು ಯೋಗ ಕಾರಕ ಇದ್ದರೆ ಶನಿಯ ಪರಿಭ್ರಮಣವು ಶುಕ್ರನ ಮೇಲಿಂದ ಆಗುವಾಗ ಶುಭ ಫಲಗಳೇ ಹೆಚ್ಚಾಗಿ ಸಿಗುತ್ತವೆ.

ಶನಿ: ಮೂಲ ಶನಿಯ ಮೇಲೆ ಗೋಚರೀ ಶನಿಯ ಪರಿಭ್ರಮಣವು ಶುಭದಾಯಕವು. ಸಾಡೇಸಾತಿಯಲ್ಲಿ ಭೀಕರತೆಯನ್ನು ಕಡಿಮೆ ಮಾಡುತ್ತದೆ. ಒಂದು ವೇಳೆ ಶನಿಯ ನೀಚ, ಅಸ್ತ, ಶತ್ರುಕ್ಷೇತ್ರಿ, ವಕ್ರಿ ಹೀಗೆ ಬಲ ಹೀನನಿದ್ದರೆ ಹಾಗೂ ಕುಂಡಲಿಗೆ ಯೋಗಕಾರಕನು ಇರದೆ ಇದ್ದರೆ, ಮೂಲ ಕುಂಡಲಿಯಲ್ಲಿ ಶನಿಯು ಅಗ್ನಿ ಹಾಗೂ ಜಲ ರಾಶಿಯಲ್ಲಿ ಇದ್ದರೆ ಕೆಳಗೆ ಕಾಣಿಸಿದಂತೆ ಅಶುಭ ಫಲಗಳು ದೊರೆಯುತ್ತವೆ.

ನ್ಯಾಯ ಖಾತೆಯಲ್ಲಿ ಕೆಲಸ ಮಾಡುವವರಿಗೆ ವಿಶೇಷವಾಗಿ ನ್ಯಾಯಾಧೀಶ ಹಾಗೂ ನ್ಯಾಯಾಧಿಕಾರ ಕಾರಕೂನರಿಗೂ ತತ್ತ್ವಜ್ಞಾನಿಗಳಿಗೂ ಸಾರ್ವಜನಿಕ ಖಾತೆಯಲ್ಲಿ ಕೆಲಸ ಮಾಡುವವರಿಗೂ. ಒಕ್ಕಲುತನವನ್ನು ಮಾಡುವ ಬೇಸಾಯಗಾರರಿಗೂ ಒಕ್ಕಲುತನ ಖಾತೆಯಲ್ಲಿ ಕೆಲಸ ಮಾಡುವವರಿಗೂ ಎಣ್ಣೆಯ ವ್ಯಾಪಾರಸ್ಥರಿಗೂ ವಿಶೇಷವಾಗಿ ಶ್ರಮಜೀವಿಗಳಿಗೂ ಅದರಲ್ಲಿಯೂ ಶಿಪಾಯಿ, ಪ್ಯಾಕರ ಮೊದಲಾದವರಿಗೂ, ಕಾರಖಾನೆಯಲ್ಲಿಯೂ ಮಿಲ್ಲಿನಲ್ಲಿಯೂ ಕಂಪನಿಯಲ್ಲಿ ಕೆಲಸ ಮಾಡುವ ಕಾಮಗಾರರಿಗೂ ಕಬ್ಬಿಣದ

ಲಸ ಮಾಡುವ ಕಾಮಗಾರ ಹಾಗೂ ವ್ಯಾಪಾರಸ್ಥರಿಗೂ ಲೇಥಶಾಪ ಮೊದಲಾದವುಗಳ ಮಾಲಿಕರಿಗೂ ವಿಶೇಷವಾಗಿ ಹಾನಿದಾಯಕವಿರುತ್ತದೆ. ಮೂಲ ಕುಂಡಲಿಯಲ್ಲಿ ಶನಿಯು ಬಲವಂತನಾದಿಯೂ ಯೋಗಕಾರಕನಾಗಿಯೂ ಇದ್ದರೆ ಸಾಡೇಸಾತಿಯಲ್ಲಿ ಸಹ ಶನಿಯ ಮೇಲಿನ ಶನಿಯ ಪರಿಭ್ರಮಣವು ಬಹಳೇ ಶುಭದಾಯಕವಿರುತ್ತದೆ.

ರಾಹು :— ಭೂ ಹಾಗೂ ವಾಯು ರಾಶಿಯಲ್ಲಿ ರಾಹು ಇದ್ದು, ಗೋಚರೀ ಶನಿಯ ಪರಿಭ್ರಮಣವು ರಾಹುವಿನ ಮೇಲಿಂದ ಆಗುವಾಗ ಶುಭ ಫಲಗಳೇ ಹೆಚ್ಚಾಗಿ ಸಿಗುತ್ತವೆ. ಆದರೆ ಅದೇ ರಾಹು ಅಗ್ನಿ ಅಥವಾ ಜಲರಾಶಿಯಲ್ಲಿದ್ದರೆ, ರವಿ ಮಂಗಳ, ಚಂದ್ರರೊಂದಿಗಿದ್ದರೆ ಕೆಳಗೆ ಕಾಣಿಸಿದಂತೆ ಅಶುಭ ಫಲಗಳು ಹೆಚ್ಚಾಗಿ ಸಿಗುತ್ತವೆ.

ಬಣ್ಣದ ಕೆಲಸಗಾರರಿಗೂ ( Painting ) ಚಿತ್ರಕಲೆ, ಡ್ರಾಯಿಂಗ್ ಕೆಲಸಗಾರರಿಗೂ ಛಾಯಾಚಿತ್ರ ಗ್ರಹಣ ( Photographer ) ಕೆಲಸಗಾರರಿಗೂ ಟಾಯಪಿಂಗ್ ಕಾರಕೂನರಿಗೂ ಸ್ಟುಡಿಯೋದ ಮಾಲಿಕರಿಗೂ ವಿಶೇಷವಾಗಿ ಹಾನಿದಾಯಕವಿರುತ್ತದೆ. ಲಾಟರಿ, ಸಟ್ಟಾ, ರೇಸ್ ಮೊದಲಾದವುಗಳಿಂದ ಆಕಸ್ಮಿಕವಾಗಿ ಹಾನಿ ಹೊಂದುವ ಸಂಭವವಿರುತ್ತದೆ. ತಾಂತ್ರಿಕ ಕೆಲಸಗಾರರಿಗೂ ಮಾಟ,ಮಾದ್ದು, ಭೂತ ಪಿಶಾಚಿಗಳನ್ನು ಮಾಡುವವರಿಗೂ (ಬಿಡಿಸುವವರಿಗೂ ) ಪೋಲಿಸ ಮಿಲಿಟರೀ ಕೆಲಸಗಾರರಿಗೂ ಹಾನಿದಾಯಕವಿರುತ್ತದೆ. ಸಂತತಿಗಳಿಂದ ಹಾನಿದಾಯಕವೂ ಆಗುತ್ತದೆ. ಹೆಣ್ಣು ಮಕ್ಕಳ ಕುಂಡಲಿಯಲ್ಲಿ ಈ ತರಹದ ಯೋಗವಾಗುತ್ತಿದ್ದರೆ ಗರ್ಭಪತನದ ಭೀತಿಯೂ ಪ್ರಸೂತಿ ವೇನೆಯಿಂದ ಜೀವಕ್ಕೆ ಹಾನಿದಾಯಕವೂ ಆಗುತ್ತದೆ.

# ೯. ಭಾವೇಶನ ಮೇಲಿಂದ ಶನಿಯ ಪರಿಭ್ರಮಣ

ಸಾಡೇಸಾತಿಯಲ್ಲಿ ಶನಿಯ ಪರಿಭ್ರಮಣವು ಯಾವ ಸ್ಥಾನದ ಮೇಲಿಂದ, ಯಾವ ರಾಶಿಯ ಮೇಲಿಂದ, ಯಾವ ಗ್ರಹದ ಮೇಲಿಂದ ಆಗುತ್ತದೆ ಎಂಬುದು ಎಷ್ಟು ಮಹತ್ವದ ಸಂಗತಿಯೋ ಅಷ್ಟೇ ಮಹತ್ವದ್ದು ಯಾವ ಭಾವೇಶನ ಮೇಲಿಂದ ಆಗುತ್ತದೆ ಎಂಬುದೂ ಇರುತ್ತದೆ. ಉದಾ:-- ಮಿಥುನ ಲಗ್ನ ಹಾಗೂ ಕನ್ಯಾ ಲಗ್ನಗಳ ಎರಡು ಕುಂಡಲಿ ನೋಡಿರಿ. ಗೋಚರಿ ಶನಿಯ ಪರಿಭ್ರಮಣವು ಶುಕ್ರನ ಮೇಲಿಂದ ಆಗುವಾಗ ಮಿಥುನ ಲಗ್ನದವರಿಗೆ ಪಂಚಮ ಹಾಗೂ ವ್ಯಯಸ್ಥಾನದ ಶುಭಾಶುಭ ಫಲಗಳು ಕನ್ಯಾ ಲಗ್ನದ (ಯಾವುದೆ ಸ್ಥಾನದಲ್ಲಿರುವ ಶುಕ್ರನ ಪರಿಣಾಮ) ಶುಕ್ರನ ಮೇಲಿನಿಂದ ಆಗುವ ಶನಿಯ ಪರಿಭ್ರಮಣವು ದ್ವಿತೀಯ ಹಾಗೂ ಭಾಗ್ಯ ಸ್ಥಾನಗಳ ಶುಭಾಶುಭ ಫಲಗಳೂ ದೊರೆಯುತ್ತವೆ.

ಇದರಂತೆ ಮಿಥುನ ಹಾಗೂ ಕನ್ಯಾ ಲಗ್ನಗಳ ಯಾವುದೇ ಸ್ಥಾನದಲ್ಲಿ ಇರುವ ಮಂಗಳನ ಮೇಲೆ ಆಗುವ ಶನಿಯ ಪರಿಭ್ರಮಣವೂ ಮಿಥುನ ಲಗ್ನದವರಿಗೆ ಷಷ್ಠ ಹಾಗೂ ಏಕಾದಶ ಸ್ಥಾನಗಳ ಅಶುಭ ಪರಿಣಾಮವೂ ಕನ್ಯಾ ಲಗ್ನದ ಯಾವುದೇ ಸ್ಥಾನದಲ್ಲಿರುವ ಮಂಗಳನ ಮೇಲೆ ಶನಿಯ ಪರಿಭ್ರಮಣವಾಗುವಾಗ ತೃತೀಯ ಹಾಗೂ ಅಷ್ಟಮ ಭಾವದ ಅಶುಭ ಫಲಗಳು ದೊರೆಯುತ್ತವೆ. ಆದುದರಿಂದ ಆಯಾ ಸ್ಥಾನದಲ್ಲಿರುವ ಗ್ರಹಗಳ ಮೇಲಿಂದಾಗುವದಕ್ಕಿಂತ ಭಾವೇಶನ ಮೇಲಿಂದ ಆಗುವ ಶನಿಯ ಪರಿಭ್ರಮಣವು ಹೆಚ್ಚು ಮಹತ್ವದ್ದೂ ಪರಿಣಾಮದಾಯಕವಾದದ್ದೂ ಇರುತ್ತದೆ.

ಭಾವೇಶನು ಶುಭದಾಯಕನೂ ಬಲವಂತನೂ ಯೋಗಕಾರಕನೂ ಇದ್ದರೆ ಶುಭಫಲಗಳೂ, ಭಾವೇಶನು ನೀಚ, ಅಸ್ತಂಗತ, ಶತೃಕ್ಷೇತ್ರೀ ಹೀಗೆ ದುರ್ಬಲನಿದ್ದರೆ ಅವನ ಮೇಲಿಂದ ಆಗುವ ಶನಿಯ ಭ್ರಮಣವು ಅಶುಭದಾಯಕವು ಇರುತ್ತದೆ.

೧

ಮೇಷ ಲಗ್ನೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ಕೆಳಗೆ ಕಾಣಿಸಿದಂತೆ ಫಲಗಳು ದೊರೆಯುತ್ತವೆ. ಲಗ್ನೇಶನು ಬಲವಂತನಾಗಿದ್ದರೆ, ಅವನದೇ ದಶ ನಡೆಯುತ್ತಿದ್ದರೆ ಆಕಸ್ಮಿಕವಾಗಿ ಧನಲಾಭವಾಗುತ್ತದೆ. ಸಟ್ಟಾ, ಲಾಟರಿ, ಶೇರು ಭೂಮಿಗತ ದ್ರವ್ಯ ಮುಂತಾದವುಗಳಿಂದಲೂ ಆಕಸ್ಮಿಕ ದ್ರವ್ಯ ಲಾಭವಾಗುತ್ತದೆ. ಲಗ್ನೇಶನು ದುರ್ಬಲನಿದ್ದು, ಅವನ ಮೇಲಿಂದ ಶನಿಯು ಭ್ರಮಿಸುವಾಗ ಆರೋಗ್ಯಕ್ಕೆ ಹಾನಿ. ಎತ್ತರದ ಮೇಲಿಂದ ಬೀಳುವ, ಕಾರು, ಸ್ಕೂಟರು, ಸಾಯಿಕಲ್ ಮುಂತಾದ ವಾಹನಗಳ ಅಪಘಾತವಾಗುವ ಸಂಭವ ( ಹೆಚ್ಚು ) ಇರುತ್ತದೆ.

ವೃಷಭ ಲಗ್ನದ ಲಗ್ನೇಶನು ಬಲವಂತನಾಗಿದ್ದು ಅವನ ಮೇಲಿಂದ ಆ ಶನಿಯು ಭ್ರಮಿಸುವಾಗ ಆಕಸ್ಮಿಕವಾಗಿ ಭಾಗ್ಯೋದಯವಾಗುತ್ತದೆ. ಲಗ್ನೇಶನು ದುರ್ಬಲನಿದ್ದರೆ ಸ್ತ್ರೀಯರಿಂದಲೂ ಶತ್ರುಗಳಿಂದಲೂ ಹಾನಿದಾಯಕವು

ಮಿಥುನ ಲಗ್ನದ ಲಗ್ನೇಶನು ಬಲವಂತನಿದ್ದು ಅವನ ಮೇಲಿಂದ ಶನಿಯ ಭ್ರಮಣವು ಗೃಹಸೌಖ್ಯಕ್ಕೆ ಲಾಭದಾಯಕವು, ಸ್ಥಾವರ ಆಸ್ತಿ ಲಾಭವು. ಲಗ್ನೇಶನು ದುರ್ಬಲನಿದ್ದರೆ ಆಕಸ್ಮಿಕವಾಗಿ ತಲೆಯ ಮೇಲೆ ಆಘಾತವಾಗುತ್ತದೆ, ಮಾತೃಸೌಖ್ಯಕ್ಕೆ ಹಾನಿದಾಯಕವು. ಸ್ಥಾವರ ಆಸ್ತಿಯಲ್ಲಿ ಹಾನಿ, ಮಾಟ-ಭೂತ ಮುಂತಾದವುಗಳಿಂದ ಬಾಧಕವು.

ಕರ್ಕ ಲಗ್ನದ ಲಗ್ನೇಶನು ಬಲವಂತನಿದ್ದು ಅವನ ಮೇಲೆ ಶನಿಯ ಪರಿಭ್ರಮಣವು ಭಾಗ್ಯೋದಯದಾಯಕವು. ಲಗ್ನೇಶನು ದುರ್ಬಲನಿದ್ದರೆ ಮಾಟ-ಭೂತ, ಪಿಶಾಚಿ ಮುಂತಾದವುಗಳಿಂದ ತಲೆಗೆ ಆಘಾತವಾಗುತ್ತದೆ. ರಕ್ತ ನ್ಯೂನತೆ, ನ್ಯೂಮೋನಿಯಾ, ಕ್ಷಯ ಮೊದಲಾದವುಗಳಿಂದ ಬಳಲುವಿಕೆ, ಮಾನಸಿಕ ಸ್ಥಿತಿಗೆ ಹಾನಿದಾಯಕವು.

ಸಿಂಹ ಲಗ್ನದ ಲಗ್ನೇಶನ ಮೇಲಿಂದ ಶನಿಯು ಭ್ರಮಿಸುವಾಗ ಆರೋಗ್ಯಕ್ಕೆ ಹಾನಿದಾಯಕವು. ರಾಜದಂಡ, ಶಿಕ್ಷೆ ಮುಂತಾದವುಗಳು ಸಂಭವಿಸುತ್ತವೆ.

ಶನು ಬಲವಂತನಿದ್ದರೆ ಮಿತ್ರ ವರ್ಗದವರಿಂದ ಲಾಭದಾಯಕ, ಬಹು-ಮುಖದಿಂದ ಧನಾರ್ಜನೆ, ಭಾಗ್ಯೋದಯ. ಲಗ್ನೇಶನು ದುರ್ಬಲನಿದ್ದರೆ, ಮಾನಸಿಕ ಸ್ಥಿತಿಗೆ ಗಂಡಾಂತರ; ಮಾಟ, ಭೂತ, ಪಿಶಾಚಿಗಳಿಂದ ತೊಂದರೆ ಹಾಗೂ ಹುಚ್ಚು ಹಿಡಿಯುವ ಸಂಭವ; ಸ್ನೇಹಿತರಿಂದ ಹಾನಿ. ವಂಚನೆ.

ತುಲಾ ಲಗ್ನದ ಲಗ್ನೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಗ್ನೇಶನು ಬಲವಂತನಿದ್ದರೆ ಆಕಸ್ಮಿಕವಾಗಿ ಧನಲಾಭವಾಗುತ್ತದೆ ಹಾಗೂ ಭಾಗ್ಯೋದಯವಾಗುತ್ತದೆ. ಲಗ್ನೇಶನು ದುರ್ಬಲನಿದ್ದರೆ ಆರೋಗ್ಯಕ್ಕೆ ಹಾನಿದಾಯಕವು. ಪರಸ್ತ್ರೀ-ಪರಪುರುಷರ ಸಹವಾಸದಿಂದ ಅಪಮಾನ, ನಿಂದೆ, ಮೂತ್ರಾಶಯ ರೋಗದಿಂದ ಬಳಲುವಿಕೆ, ಮಧುಮೇಹದ ಭೀತಿ.

ವೃಶ್ಚಿಕ ಲಗ್ನದ ಲಗ್ನೇಶನ ಮೇಲಿಂದ ಶನಿಯು ಭ್ರಮಿಸುವಾಗ ಚೋರಭಯ ಅಗ್ನಿ ಭಯ ಹಾಗೂ ಶತ್ರುಗಳಿಂದ ಹಾನಿ, ಕೊಲೆ ಮುಂತಾದವುಗಳಿಂದ ಹಾನಿದಾಯಕವೂ ಆಗುತ್ತದೆ.

ಧನು ಲಗ್ನದ ಲಗ್ನೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಗ್ನೇಶನು ಬಲವಂತನಿದ್ದರೆ ಮಾತೃಸೌಖ್ಯಕ್ಕೆ ಉತ್ತಮ. ಸ್ಥಾವರ ಆಸ್ತಿಯಿಂದ ಲಾಭ, ವಾಹನ ಸೌಖ್ಯ ಉತ್ತಮ. ಲಗ್ನೇಶನು ದುರ್ಬಲನಿದ್ದರೆ ಮಾತೃ-ಸೌಖ್ಯಕ್ಕೆ ಹಾನಿ, ಸ್ಥಾವರ ಆಸ್ತಿಯಿಂದ ಹಾನಿ.

ಮಕರ ಲಗ್ನದ ಅಧಿಪತಿಯು ಶನಿಯು. ಮೂಲ ಕುಂಡಲಿಯಲ್ಲಿ ಶನಿಯು ಬಲವಂತನಿದ್ದು ಶನಿಯ ಮೇಲೆ ಶನಿಯ ಭ್ರಮಣವು ಆರ್ಥಿಕ ಹಾಗೂ ಆರೋಗ್ಯಕ್ಕೆ ಲಾಭದಾಯಕವು. ಶನಿಯು ದುರ್ಬಲನಿದ್ದರೆ ಆರ್ಥಿಕ ಹಾಗೂ ಆರೋಗ್ಯಕ್ಕೆ ಹಾನಿದಾಯಕವು.

ಕುಂಭ ಲಗ್ನದ ಅಧಿಪತಿಯಾದರೂ ಶನಿಯು. ಮೂಲ ಕುಂಡಲಿಯಲ್ಲಿ ಶನಿಯು ಬಲವಂತನಿದ್ದು ಶನಿಯ ಮೇಲಿಂದ ಶನಿಯ ಭ್ರಮಣವು ಭಾಗ್ಯೋ-ದಯವು. ಶನಿಯು ದುರ್ಬಲನಿದ್ದರೆ, ಶನಿಯ ಮೇಲಿಂದ ಶನಿಯ ಭ್ರಮಣವು ಅಧೋಗತಿಗೆ ಇಳಿಸುತ್ತದೆ.

ಮೀನ ಲಗ್ನದ ಲಗ್ನೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಗ್ನೇಶನು ಬಲವಂತನಿದ್ದರೆ ವ್ಯಾಪಾರ-ಉದ್ಯೋಗ, ನೌಕರಿಯಲ್ಲಿ ಲಾಭದಾಯಕ, ಲಗ್ನೇಶನು ದುರ್ಬಲನಿದ್ದರೆ ಹಾನಿದಾಯಕವು. ಪಿತೃ ಸೌಖ್ಯಕ್ಕೆ ಹಾನಿ.

೨

ಮೇಷ ಲಗ್ನದ ಧನೇಶನ ಮೇಲಿಂದ ಶನಿಯ ಭ್ರಮಣವಾಗುತ್ತಿದ್ದಾಗ ಧನೇಶನು ಬಲವಂತನಿದ್ದರೆ ಪಿತ್ರಾರ್ಜಿತ ಆಸ್ತಿಯಿಂದ ಲಾಭದಾಯಕವು. ಆರ್ಥಿಕ ದೃಷ್ಟಿಯಿಂದ ಅನುಕೂಲವು, ವೈವಾಹಿಕ ಜೀವನಕ್ಕೆ ಲಾಭದಾಯಕವು. ಕೋರ್ಟು-ಕಚೇರಿ ಕೆಲಸದಲ್ಲಿ ಯಶಸ್ಸು, ವ್ಯಾಪಾರದಲ್ಲಿ ಅನುಕೂಲ. ದೂರದ ಪ್ರವಾಸ (ಜಲಪರ್ಯಟನ) ವಾಗುವದು. ಧನೇಶನು ದುರ್ಬಲನಿದ್ದು, ಅವನ ಮೇಲಿಂದ ಶನಿಯು ಭ್ರಮಿಸುವಾಗ ಪಿತ್ರಾರ್ಜಿತ ಸೌಖ್ಯಕ್ಕೆ ಹಾನಿ. ಕೋರ್ಟು-ಕಚೇರಿ ಹಾಗೂ ವ್ಯಾಪಾರದಲ್ಲಿ ಹಾನಿ. ವೈವಾಹಿಕ ಜೀವನದಲ್ಲಿ ಹಾನಿದಾಯಕ, ವಿಶೇಷತಃ ಹಾಡುಗಾರರಿಗೆ ಹಾನಿ.

ವೃಷಭ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಧನೇಶನು ಬಲವಂತನಿದ್ದರೆ ಪಿತ್ರಾರ್ಜಿತ ಆಸ್ತಿಯ ಸೌಖ್ಯ, ಧನಲಾಭ. ಸಂತತಿಗಳಿಂದ ಸೌಖ್ಯ, ವಿದ್ಯಾಭ್ಯಾಸದಲ್ಲಿ ಯಶಸ್ಸು, ಲೇಖನೀವ್ಯವಸಾಯದಲ್ಲಿ ಲಾಭ, ವಿದ್ಯೆಗೋಸ್ಕರ ಆರ್ಥಿಕ ಲಾಭ. ಧನೇಶನು ದುರ್ಬಲನಿದ್ದರೆ ಆರ್ಥಿಕ ಮುಗ್ಗಟ್ಟು, ವಿದ್ಯಾಭ್ಯಾಸದಲ್ಲಿ ಹಾನಿ, ಸಂತತಿ ಸ್ನೇಹಕ್ಕೆ ಭಂಗ, ಕೇವು-ಇಡುಗಂಟುಗಳ ಅಪವ್ಯಯ.

ಮಿಥುನ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಿತ್ರಾರ್ಜಿತ ಆಸ್ತಿಯಲ್ಲಿ ಹಾನಿ. ಗಾಯಕರು ಹಾಗೂ ಭಾಷಣಕಾರರಿಗೆ ಹಾನಿದಾಯಕವು. ಕಳವು ದರೋಡೆಗಳ ಭಯ, ಕೌಟುಂಬಿಕ ಸುಖಕ್ಕೆ ಹಾನಿದಾಯಕವು.

ಕರ್ಕ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಿತ್ರಾರ್ಜಿತ ಆಸ್ತಿ ಹಾಗೂ ಪಿತೃಸ್ನೇಹಕ್ಕೆ ಹಾನಿ, ಜಾಮೀನ ಹಾಗೂ ಮಧ್ಯಸ್ಥಿಕೆಯಿಂದ ಹಾನಿ, ಪಿತ್ರಾರ್ಜಿತ ಆಸ್ತಿಯ ಅಪವ್ಯಯ.

ಸಿಂಹ ಲಗ್ನದ ಧನೇಶನ ಮೇಲಿಂದ ಶನಿಯ ಪರಿಭ್ರಮಣವು ಧನೇಶನು ಬಲವಂತನಿದ್ದರೆ ಆರ್ಥಿಕ ಲಾಭ, ಪಿತ್ರಾರ್ಜಿತ ಆಸ್ತಿಯ ಸೌಖ್ಯ, ಸ್ನೇಹಿತರಿಂದ ಲಾಭ, ಬಹುಮುಖದಿಂದ ದ್ರವ್ಯಲಾಭ, ಧನೇಶನು ದುರ್ಬಲನಿದ್ದರೆ ಪಿತ್ರಾರ್ಜಿತ ಆಸ್ತಿಯ ಹಾನಿ, ಸ್ನೇಹಿತರಿಂದ ಹಾನಿ ಹಾಗೂ ವಂಚನೆ,

ಅನೇಕ ಬಗೆಯಿಂದ ಖರ್ಚು.

ಕನ್ಯಾ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಧನೇಶನು ಬಲವಂತನಿದ್ದರೆ ಎಲ್ಲ ರೀತಿಯಿಂದಲೂ ಭಾಗ್ಯೋದಯವು, ಧನೇಶನು ದುರ್ಬಲನಿದ್ದರೆ ಎಲ್ಲ ರೀತಿಯಿಂದಲೂ ಹಾನಿದಾಯಕವು.

ತುಲಾ ಲಗ್ನದ ಧನೇಶನ ಮೇಲಿಂದ ಶನಿ ಭ್ರಮಿಸುವಾಗ ಆರ್ಥಿಕ ಅಡಚಣೆ, ವ್ಯಾಪಾರದಲ್ಲಿ ಹಾನಿ, ಕೋರ್ಟು ಕಚೇರಿ ಕೆಲಸಗಳಿಗೆ ಹಾನಿ, ವೈವಾಹಿಕ ಜೀವನದಲ್ಲಿ ಹಾನಿ, ವಿಶೇಷತಃ ಮಶಿನರಿ, ಇಲೆಕ್ಟ್ರಿಕ್ ವ್ಯಾಪಾರಸ್ಥರಿಗೆ ಹಾನಿದಾಯಕವು. ಪತಿಪತ್ನಿಯರಲ್ಲಿ ಭಿನ್ನಾಭಿಪ್ರಾಯವು.

ವೃಶ್ಚಿಕ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಧನೇಶನು ಬಲವಂತನಿದ್ದರೆ ಪಿತ್ರಾರ್ಜಿತ ಸೌಖ್ಯ, ವಿದ್ಯೆಯಲ್ಲಿ ಪ್ರಗತಿ ಕೀರ್ತಿ ಸಂತತೀ ಸುಖ. ಧನೇಶನು ದುರ್ಬಲನಿದ್ದರೆ, ಪಿತ್ರಾರ್ಜಿತ ಅಪವ್ಯಯ, ವಿದ್ಯಾಭ್ಯಾಸಕ್ಕೆ ಅಡಚಣೆ, ಸಂತತೀ ಸೌಖ್ಯಕ್ಕೆ ಹಾನಿದಾಯಕ.

ಧನು ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಧನೇಶನು ಬಲವಂತನಿದ್ದರೆ ಎಲ್ಲ ರೀತಿಯಿಂದ ಲಾಭ ಕೀರ್ತಿ, ಧನೇಶನು ದುರ್ಬಲನಿದ್ದರೆ, ಋಣದ ಅಡಚಣೆ, ಬಂಧುಗಳಿಂದ ಹಾನಿ, ಅಪಮಾನ.

ಮಕರ ಲಗ್ನದ ಧನೇಶನು ಬಲವಂತನಿದ್ದರೆ ಎಲ್ಲ ರೀತಿಯಿಂದ ಲಾಭದಾಯಕವು. ಧನೇಶನು ದುರ್ಬಲನಿದ್ದರೆ ಜಮೀನು ದತ್ತಿ ಇವುಗಳಿಂದ ಹಾನಿ, ಕಳವು ದರೋಡೆಗಳಿಂದ ಹಾನಿ.

ಕುಂಭ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಧನೇಶನು ಬಲವಂತನಿದ್ದರೆ ಬಹುಮುಖದಿಂದ ಧನಲಾಭ, ಮಾನ-ಸನ್ಮಾನ, ಸ್ನೇಹಿತ ಸಹಾಯ. ಧನೇಶನು ದುರ್ಬಲನಿದ್ದರೆ ಕೌಟುಂಬಿಕ ಸೌಖ್ಯಕ್ಕೆ ಹಾನಿ, ಬಹುಮುಖದಿಂದ ಖರ್ಚು, ಮಿತ್ರ ವರ್ಗದವರಿಂದ ವಂಚನೆ, ಹಾಗೂ ಹಾನಿ, ಅನೇಕ ಬಗೆಯ ಟ್ಯಾಕ್ಸಗಳಿಂದ ಹಾನಿ.

ಮೀನ ಲಗ್ನದ ಧನೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಿತ್ರಾರ್ಜಿತ ಸೌಖ್ಯಕ್ಕೆ ಹಾನಿ ಜಮೀನ-ವಸ್ತು ಸ್ಥಿರಗಳಿಂದ ಹಾನಿ, ಎಲ್ಲ ರೀತಿಯಿಂದಲೂ ಹಾನಿದಾಯಕವು.

೩

ಮೇಷ ಹಾಗೂ ಕರ್ಕ ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ತೃತೀಯೇಶನು ಬಲವಂತನಿದ್ದರೆ ನೃತ್ಯ, ಸಂಗೀತ ಸಾಹಿತ್ಯ ಮುಂತಾದ ಲಲಿತ ಕಲೆಗಳಲ್ಲಿ ಪ್ರಾವೀಣ್ಯತೆ, ಸಂಘಸಂಸ್ಥೆಗಳಿಂದ ಮಾನ ಮರ್ಯಾದೆಯು (ಚೇರಮನ್–ಅಧ್ಯಕ್ಷಸ್ಥಾನ) ಲಾಭ. ಭಾಷಣದಲ್ಲಿ ಪ್ರಾವೀಣ್ಯತೆಯನ್ನೂ ಹೊಂದುವನು. ತೃತೀಯೇಶನು ದುರ್ಬಲನಿದ್ದರೆ ಮೇಲೆ ತೋರಿಸಿದ ಎಲ್ಲ ರಂಗಗಳಲ್ಲಿ ಹಾನಿದಾಯಕವಾಗುತ್ತದೆ.

ವೃಷಭ ಲಗ್ನದ ತೃತೀಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ತೃತೀಯೇಶನು ಬಲವಂತನಿದ್ದರೆ ಬಹಳ ಪ್ರವಾಸ, ಜಲಪರ್ಯಟನ ಯೋಗ,ವಿದೇಶ ಪ್ರಯಾಣವನ್ನೂ ಕೊಡುತ್ತಾನೆ. ತೃತೀಯೇಶನು ಈ ಲಗ್ನದ ಭಾಗ್ಯದಲ್ಲಿ ಇದ್ದು ಶನಿಯು ಪರಿಭ್ರಮಣ ಅವನ ಮೇಲಿಂದ ಆಗು-ವಾಗವಂತೂ ಪ್ರವಾಸಮಯ ಜೀವನವಾಗುತ್ತದೆ. ತೃತೀಯೇಶನು ದುರ್ಬಲನಿದ್ದರೆ ಪ್ರವಾಸದಲ್ಲಿ ಹಾನಿ, ಅನಾವಶ್ಯಕವಾಗಿ ಪ್ರವಾಸ ಹಾಗೂ ಹಣದ ಅಪವ್ಯಯವಾಗುತ್ತದೆ. ಅಪಕೀರ್ತಿ, ಶಿಕ್ಷೆ, ದಂಡ, ಜಪ್ತಿ, ಅಮರ್ಯಾದೆ ಹೀಗೆ ಅಪಮಾನಕಾರಕ ಸಂಗತಿಗಳು ಜರಗುತ್ತವೆ. ಆರ್ಥಿಕಕ್ಕಿಂತ ಮಾನಸಿಕ ಸ್ಥಿತಿಗೆ ಹೆಚ್ಚು ಹಾನಿದಾಯಕವು.

ಮಿಥುನ ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿಶೇಷವಾಗಿ ರಾಜಕೀಯ ವರ್ಗ ಹಾಗೂ ನೌಕರದಾರರ ವರ್ಗ ಮತ್ತೂ ಸಂಘ ಸಂಸ್ಥೆಗಳ ಅಧ್ಯಕ್ಷ, ಚೇರಮನ್ನ ಮುಂತಾದ ಜನರಿಗೆ ಶಿಕ್ಷೆ. ದಂಡ, ಜಪ್ತಿ, ಅಪಕೀರ್ತಿ, ಅಮರ್ಯಾದೆ ಮುಂತಾದ ಅಪಮಾನಕಾರಕ ಸಂಗತಿ ಜರಗುತ್ತವೆ.

ಸಿಂಹ ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ತೃತೀಯೇಶನು ಬಲವಂತನಿದ್ದರೆ ಕಲಾಕಾರ ವರ್ಗದವರಿಗೂ ಸ್ವತಂತ್ರ ರೀತಿಯ ವ್ಯಾಪಾರಸ್ಥರಿಗೂ ವಿಶೇಷವಾಗಿ ಮಾನ ಮರ್ಯಾದೆ ಸಿಗುತ್ತದೆ. ದೂರದ ಪ್ರವಾಸದಲ್ಲಿ ಧನಾರ್ಜನೆ ಚನ್ನಾಗಿ ಆಗುತ್ತದೆ. ತೃತೀಯೇಶನು ದುರ್ಬಲನಿದ್ದರೆ ಮೇಲೆ ತೋರಿಸಿದ ಎಲ್ಲ ಕ್ಷೇತ್ರಗಳಲ್ಲಿ ಹಾನಿದಾಯಕವು.

ಕನ್ಯಾ ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ಅನೇಕ ತರಹದ ಗಂಡಾಂತರಗಳು ಆಕಸ್ಮಿಕವಾಗಿ ಬರುವವು. ವಿಶೇಷವಾಗಿ ಪ್ರವಾಸದಲ್ಲಿ ಹಾನಿ, ಚೋರಭಯ, ಅಗ್ನಿಭಯ, ಅಪಘಾತ, ಕೊಲೆ ಅಲ್ಲದೆ ಆರೋಗ್ಯಕ್ಕೆ ಆಕಸ್ಮಿಕವಾಗಿ ತೊಂದರೆ.

ತುಲಾ ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ತೃತೀಯೇಶನು ಬಲವಂತನಿದ್ದರೆ ಎಲ್ಲ ರೀತಿಯಲ್ಲಿ ಕೀರ್ತಿ, ಸಂಘ ಸಂಸ್ಥೆಗಳಲ್ಲಿ ಮಾನ, ಜಯ, ಯಶ, ಬಂಧುಗಳ ಸೌಖ್ಯ. ತೃತೀಯೇಶನು ದುರ್ಬಲನಿದ್ದರೆ ಎಲ್ಲ ಸಂಗತಿಗಳಲ್ಲಿ ಹಾನಿ, ಅಪಕೀರ್ತಿ, ಶತೃಗಳಿಂದ ಹಾನಿಯಾಗುತ್ತದೆ.

ವೃಶ್ಚಿಕ ಹಾಗೂ ಧನು ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ತೃತೀಯೇಶನು ಬಲವಂತನಿದ್ದರೆ ಸ್ಥಾವರ ಇಸ್ಟೇಟನಲ್ಲಿ ಲಾಭ. ಪ್ರವಾಸದಲ್ಲಿ ಲಾಭ. ತೃತೀಯೇಶನು ದುರ್ಬಲನಿದ್ದರೆ ಮೇಲೆ ಕಾಣಿಸಿದ ಎಲ್ಲ ಸಂಗತಿಗಳಲ್ಲಿ ಹಾನಿದಾಯಕವು.

ಮೀನ ಲಗ್ನದ ತೃತೀಯೇಶನ ಮೇಲಿಂದ ಶನಿಯು ಭ್ರಮಿಸುವಾಗ ತೃತೀಯೇಶನು ಬಲವಂತನಿದ್ದರೆ ಎಲ್ಲ ರೀತಿಯಲ್ಲಿ ಕೀರ್ತಿದಾಯಕವು. ವಿಶೇಷವಾಗಿ ಕಲಾಕಾರರಿಗೆ ಲಾಭದಾಯಕವು. ತೃತೀಯೇಶನು ದುರ್ಬಲ-ನಿದ್ದರೆ ಎಲ್ಲ ರೀತಿಯಲ್ಲಿ ಹಾನಿದಾಯಕ ಹಾಗೂ ಆರೋಗ್ಯಕ್ಕೆ ಹಾನಿ, ವಿಶೇಷವಾಗಿ ಮೂತ್ರಾಶಯದ ಭಾಗದಿಂದ ಬಳಲುವಿಕೆ.

## ೪

ಮೇಷ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ ಮಾತೃ ಸೌಖ್ಯಕ್ಕೆ ವಿಶೇಷವಾಗಿ ಹಾನಿದಾಯಕ. ಸ್ಥಾವರ ಆಸ್ತಿಯಲ್ಲಿ ಹಾನಿ. ಎಲ್ಲ ರೀತಿಯಿಂದಲೂ ಸುಖಕ್ಕೆ ವ್ಯತ್ಯಯ.

ವೃಷಭ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ ಮಾತೃ ಹಾಗೂ ಪಿತೃ ಸೌಖ್ಯಕ್ಕೆ ಹಾನಿದಾಯಕವು. ರಾಜಕೀಯ ಹಾಗೂ ಸಂಘ-ಸಂಸ್ಥೆಗಳಲ್ಲಿರುವವರಿಗೆ ಅಸುಖ, ಅಶಾಂತತೆ, ಸ್ಥಾವರ ಆಸ್ತಿಯಲ್ಲಿ ಹಾನಿದಾಯಕ.

ಮಿಥುನ ಹಾಗೂ ಮೀನ ಲಗ್ನದ ಸುಖೇಶನು ಬಲವಂತನಿದ್ದರೆ ವಿಶೇಷ

ವಾಗಿ, ವ್ಯಾಪಾರಸ್ಥರಿಗೆ ಹಾಗೂ ಲೇಖಕರಿಗೆ ಲಾಭದಾಯಕವು ಸ್ಥಾವರ ಆಸ್ತಿಯಲ್ಲಿ ಹಾಗೂ ಕೋರ್ಟು ಕಚೇರಿಯ ಕೆಲಸದಲ್ಲಿ ಲಾಭದಾಯಕವು. ವಾಹನ ಸೌಖ್ಯ ಉತ್ತಮವು. ಸುಖೇಶನು ದುರ್ಬಲನಿದ್ದರೆ ಮೇಲೆ ಕಾಣಿಸಿದ ಎಲ್ಲ ಸಂಗತಿಗಳಲ್ಲಿ ಹಾನಿದಾಯಕವು.

ಕರ್ಕ ಹಾಗೂ ಕುಂಭ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ, ಸುಖೇಶನು ಬಲವಂತನಿದ್ದರೆ ಮಾತೃಸೌಖ್ಯಕ್ಕೆ ಉತ್ತಮ. ವ್ಯಾಪಾರ ಉದ್ಯೋಗದಲ್ಲಿ ಲಾಭ. ಸ್ಥಾವರ ಆಸ್ತಿಯಲ್ಲಿ ಲಾಭ, ವಾಹನ ಸೌಖ್ಯ ಉತ್ತಮ. ಮಿತ್ರ ವರ್ಗದವರಿಗೆ ಸಹಾಯ, ಎಲ್ಲ ರೀತಿಯಿಂದಲೂ ಭಾಗ್ಯೋದಯ. ಸುಖೇಶನು ದುರ್ಬಲನಿದ್ದರೆ ಮೇಲೆ ತೋರಿಸಿದ ಎಲ್ಲ ರೀತಿಯಿಂದಲೂ ಹಾನಿದಾಯಕವು.

ಸಿಂಹ ಹಾಗೂ ಮಕರ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ ಸುಖೇಶನು ಬಲವಂತನಿದ್ದು ಅವನದೇ ದಶೆ ನಡೆಯುತ್ತಿದ್ದರೆ ಆಕಸ್ಮಿಕವಾಗಿ ದ್ರವ್ಯಲಾಭ, ಸ್ಥಾವರ ಆಸ್ತಿಯಲ್ಲಿ ಲಾಭ, ವಾಹನ ಸೌಖ್ಯ ಉತ್ತಮ. ಗೆಳೆಯರಿಂದ ಸಹಾಯ, ಮಶಿನರಿಯಲ್ಲಿ ಲಾಭ ಸುಖೇಶನು ದುರ್ಬಲನಿದ್ದರೆ ಮೇಲೆ ಕಾಣಿಸಿದ ಎಲ್ಲ ಸಂಗತಿಗಳಲ್ಲಿ ಆಕಸ್ಮಿಕವಾಗಿ ಹಾನಿದಾಯಕವಲ್ಲದೆ, ಅಪಘಾತ, ಹಾಗೂ ಒಮ್ಮೆಲೆ ಕೀಳು ಪರಿಸ್ಥಿತಿ ಬರುತ್ತದೆ. ಹೃದಯ ವಿಕಾರದಿಂದ ಬಳಲುವಿಕೆ ಹಾಗೂ ಎಲ್ಲ ರೀತಿಯಲ್ಲಿ ಅಶಾಂತತೆ ಮತ್ತು ಅಸುಖವಾಗುತ್ತದೆ.

ತುಲಾ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ ಸುಖೇಶನು ಬಲವಂತನಿದ್ದರೆ (ರಾಜಯೋಗ ಕಾರಕ) ವಾಹನ ಸೌಖ್ಯ, ಆರ್ಥಿಕ ಸೌಖ್ಯ, ಮಾನ ಮರ್ಯಾದೆ ಹೀಗೆ ಎಲ್ಲ ರೀತಿಯಿಂದಲೂ ಲಾಭದಾಯಕ. ಸುಖೇಶನು ದುರ್ಬಲನಿದ್ದರೆ ಎಲ್ಲ ರೀತಿಯಿಂದ ಹಾನಿದಾಯಕ.

ವೃಶ್ಚಿಕ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ ಸುಖೇಶನು ಬಲವಂತನಿದ್ದರೆ ಎಲ್ಲ ರೀತಿಯಿಂದ ಲಾಭ ಹಾಗೂ ಕೀರ್ತಿ, ದುರ್ಬಲನಿದ್ದರೆ ಅಪಕೀರ್ತಿ, ಸಹೋದರರಿಂದ ಹಾನಿ. ಪ್ರವಾಸದಲ್ಲಿ ಹಾನಿ.

ಧನು ಹಾಗೂ ಕನ್ಯಾ ಲಗ್ನದ ಸುಖೇಶನ ಮೇಲಿಂದ ಶನಿಯು ಭ್ರಮಿಸುವಾಗ ಸುಖೇಶನು ಬಲವಂತನಿದ್ದರೆ ಮಾತೃ ಪಿತೃಗಳಿಂದ ಸುಖ ಹಾಗೂ

ಸಹಾಯ, ವಾಹನ ಸೌಖ್ಯ, ಆರ್ಥಿಕ ಸೌಖ್ಯ, ವ್ಯಾಪಾರ ಉದ್ಯೋಗ, ನೌಕರಿ, ಹೀಗೆ ಎಲ್ಲ ರೀತಿಯಿಂದಲೂ ಲಾಭ; ಸುಖೇಶನು ದುರ್ಬಲನಿದ್ದರೆ ಮೇಲೆ ಕಾಣಿಸಿದ ಎಲ್ಲ ಸಂಗತಿಗಳಲ್ಲಿ ಹಾನಿ.

೫

ಮೇಷ ಲಗ್ನದ ಪಂಚಮೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿದ್ಯಾಭ್ಯಾಸಕ್ಕೆ ತೊಂದರೆ, ಜ್ಯೇಷ್ಠ ಪುತ್ರನೊಂದಿಗೆ ಮನಸ್ತಾಪ ಹಾಗೂ ಹಾನಿದಾಯಕವು.

ವೃಷಭ, ಮಿಥುನ ಲಗ್ನದ ಪಂಚಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಂಚಮೇಶನು ಬಲವಂತನಿದ್ದರೆ, ವಿದ್ಯಾಭ್ಯಾಸದಲ್ಲಿ ಪ್ರಗತಿ, ಯಶಸ್ಸು, ಸ್ಪರ್ಧೆಯಲ್ಲಿ ಯಶ,ವಿಶೇಷವಾಗಿ ಲೇಖಿನೀ ವ್ಯವಸಾಯದವರಿಗೂ ಕಲಾಕಾರರಿಗೂ ಅನುಕೂಲ. ಪುತ್ರಸೌಖ್ಯ ಉತ್ತಮ. ಪಂಚಮೇಶನು ದುರ್ಬಲನಿದ್ದರೆ ವಿದ್ಯಾಭ್ಯಾಸಕ್ಕೆ ತೊಂದರೆ, ವಿಘ್ನ. ಲೇಖಿನೀ ವ್ಯವಸಾಯದವರಿಗೂ ಕಲಾಕಾರ ವರ್ಗದವರಿಗೂ ಹಾನಿದಾಯಕ. ಬ್ಯಾಂಕ್-ಪೋಸ್ಟ್‌ನಲ್ಲಿಟ್ಟ ಠೇವು ಹಣದ ಅಪವ್ಯಯ.

ಧನು ಹಾಗೂ ಕರ್ಕ ಲಗ್ನದ ಪಂಚಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಂಚಮೇಶನು ಬಲವಂತನಿದ್ದು ಅವನದೇ ದಶೆ ನಡೆಯುತ್ತಿದ್ದರೆ ವಿದ್ಯಾಭ್ಯಾಸದಲ್ಲಿಯೂ ಉದ್ಯೋಗ ನೌಕರಿಯಲ್ಲಿಯೂ ಯಶಸ್ಸು. ವಿಶೇಷವಾಗಿ ತಾಂತ್ರಿಕ, ಇಂಜನಿಯರ್ಸ್, ಡಾಕ್ಟರ್, ವಿದ್ಯಾರ್ಥಿಗಳಿಗೆ ಅನುಕೂಲ, ಪಂಚಮೇಶನು ದುರ್ಬಲನಿದ್ದು ಅವನ ಮೇಲಿಂದ ಶನಿಯ ಭ್ರಮಣವು ವಿದ್ಯಾಭ್ಯಾಸದಲ್ಲಿ ವಿಘ್ನ, ತೊಡಕು, ವ್ಯಾಪಾರ ಉದ್ಯೋಗದಲ್ಲಿ ಹಾನಿ. ಸಂತತೀ ಸುಖಕ್ಕೆ ಹಾನಿದಾಯಕ. ಗರ್ಭಪತನ ಭೀತಿ, ಪುತ್ರರೊಂದಿಗೆ ಮನಸ್ತಾಪ, ಕಲಹ, ವಿರೋಧ.

ಸಿಂಹ ಹಾಗೂ ವೃಶ್ಚಿಕ ಲಗ್ನದ ಪಂಚಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಂಚಮೇಶನು ಬಲವಂತನಿದ್ದು ಅವನದೇ ಮಹರ್ದಶ ನಡೆಯುತ್ತಿದ್ದರೆ ವಿದ್ಯಾಭ್ಯಾಸದಲ್ಲಿ ಯಶಸ್ಸು, ಉಚ್ಚ ಶಿಕ್ಷಣ ಹಾಗೂ ವಿದೇಶ ಶಿಕ್ಷಣದಲ್ಲಿ ಅನುಕೂಲ, ಉಚಿತ ಶಿಕ್ಷಣ, ಬಹುಮಾನ ಸಿಗುವ ಸಂಭವ ಲೇಖಿನೀ

ವ್ಯವಸಾಯದವರಿಗೆ ಅನುಕೂಲ. ಪುತ್ರಸೌಖ್ಯ ಉತ್ತಮ. ಪಂಚಮೇಶನು ದುರ್ಬಲನಿದ್ದರೆ ವಿದ್ಯಾಭ್ಯಾಸದಲ್ಲಿ ವಿಘ್ನ, ತೊಂದರೆ, ಆರೋಗ್ಯ ಹಾನಿ, ವಿಶೇಷವಾಗಿ ಅಪಚನ, ರಕ್ತನ್ಯೂನತೆಯಾಗುತ್ತದೆ. ವಾದ ಸ್ಪರ್ಧೆಯಲ್ಲಿ ಹಾನಿ.

ಕನ್ಯಾ, ತುಲಾ ಲಗ್ನದ ಪಂಚಮೇಶನು ಬಲವಂತನಿದ್ದು ಅವನ ಮೇಲಿಂದ ಶನಿಯು ಭ್ರಮಿಸುವಾಗ (ತುಲಾ ಲಗ್ನ ವಿಶೇಷ)ವಾಹನ ಸೌಖ್ಯ, ಇಸ್ಟೇಟನಲ್ಲಿ ಲಾಭ. ವಿದ್ಯಾಭ್ಯಾಸದಲ್ಲಿ ಅನುಕೂಲ. ಪಂಚಮೇಶನು ದುರ್ಬಲನಿದ್ದು ಶನಿಯ ಪರಿಭ್ರಮಣವು ಮಾತೃಸೌಖ್ಯಕ್ಕೆ ಮತ್ತು ಪುತ್ರ ಸೌಖ್ಯಕ್ಕೆ ಹಾಗೂ ವಿದ್ಯಾಭ್ಯಾಸದಲ್ಲಿ ಹಾನಿದಾಯಕವು.

ಮೀನ ಲಗ್ನದ ಪಂಚಮೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿದ್ಯಾಭ್ಯಾಸದಲ್ಲಿ ವಿಘ್ನ, ತೊಡಕು. ಪುತ್ರ ಸೌಖ್ಯಕ್ಕೆ ಹಾನಿ, ಪ್ರೇಮ ಹಾಗೂ ಪ್ರಣಯಗಳಿಂದ ಪ್ರೇಮ ವಿವಾಹ ಆಗುವ ಸಂಭವ, ಪರಸ್ತ್ರೀ-ಪರಪುರುಷರ ಸಹವಾಸದಿಂದ ಅಪಮಾನವಾಗುವ ಸಂಭವ.

ಮಕರ-ಕುಂಭ ಲಗ್ನಗಳ ಪಂಚಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಂಚಮೇಶನು ಬಲವಂತನಿದ್ದರೆ ವಿದ್ಯಾಭ್ಯಾಸದಲ್ಲಿ ಹಾಗೂ ಲೇಖಕರಿಗೂ ಕಲಾಕಾರರಿಗೂ ಪ್ರಗತಿ, ಯಶ, ವ್ಯಾಪಾರ ಉದ್ಯೋಗದಲ್ಲಿ ಲಾಭ. ಪಂಚಮೇಶನು ದುರ್ಬಲನಿದ್ದರೆ ಮೇಲೆ ಕಾಣಿಸಿದ ಎಲ್ಲ ಸಂಗತಿಗಳಲ್ಲಿ ಹಾನಿದಾಯಕ.

೬

ಮೇಷ ಹಾಗೂ ಮಕರ ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ ಷಷ್ಠೇಶನು ಬಲವಂತನಿದ್ದರೆ ಕಲಾಕಾರರಿಗೂ ವ್ಯಾಪಾರ ಉದ್ಯೋಗಸ್ಥರಿಗೂ ಅನುಕೂಲ. ಷಷ್ಠೇಶನು ದುರ್ಬಲನಿದ್ದರೆ ಶತ್ರುಗಳಿಂದ ಹಾನಿದಾಯಕ. ಮಾಲರೋಗ ಬಾಲುಪಿಕೆ, ತಲೆಗೆ ಆಘಾತವಾಗುವ ಸಂಭವ.

ವೃಷಭ ಹಾಗೂ ಧನು ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ ಷಷ್ಠೇಶನು ಬಲವಂತನಿದ್ದರೆ ವ್ಯಾಪಾರ ಉದ್ಯೋಗದಲ್ಲಿ ಲಾಭದಾಯಕವು. ಷಷ್ಠೇಶನು ದುರ್ಬಲನಿದ್ದರೆ ಆರೋಗ್ಯಕ್ಕೆ ಹಾನಿ, ಶತ್ರುಗಳಿಂದ ಮಿತ್ರ

ರಿಂದ ವಂಚನೆ, ಹಾನಿ, ಚೋರ ಭಯ, ಅಗ್ನಿಭಯ, ಪರಸ್ತ್ರೀ –ಪರ ಪುರುಷರಿಂದ ಅಪಮಾನ.

ಮಿಥುನ ಹಾಗೂ ವೃಶ್ಚಿಕ ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ, ಚೋರ ಭಯ, ಅಗ್ನಿಭಯ, ಕೊಲೆ, ಅಪಘಾತ ಮೊದಲಾದ ಸಂಗತಿಗಳು ನಡೆಯುವವಲ್ಲದೆ ನೌಕರಿಯಲ್ಲಿ ಹಿಂಬಡತಿ, ಸಸ್ಪೆಂಡ, ಕೆಳಗಿನ ನೌಕರರಿಂದ ಮೋಸ, ವಂಚನೆ ಫಿತೂರಿ- ವ್ಯಾಪಾರಸ್ಥರಿಗೂ ಹಾಗೂ ಸ್ವಂತ ಕೆಲಸಗಾರರಿಗೂ ಆಕಸ್ಮಿಕವಾದ ಹಾನಿಯಾಗುತ್ತದೆ. ವಿಶೇಷವಾದ ಮಶಿನರೀ ತಾಂತ್ರಿಕ ಕೆಲಸಗಾರರಿಗೆ ಹೆಚ್ಚಿನ ಹಾನಿ.

ಕರ್ಕ ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ ಷಷ್ಠೇಶನು ಬಲವಂತನಿದ್ದರೆ ಭಾಗ್ಯವೃದ್ಧಿ, ದುರ್ಬಲನಿದ್ದರೆ ಆರೋಗ್ಯಕ್ಕೆ ಹಾನಿ.

ತುಲಾ ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ ಷಷ್ಠೇಶನು ಬಲವಂತನಿದ್ದರೆ ಎಲ್ಲ ಕೆಲಸಗಳಲ್ಲಿ ವಿಜಯ, ಕೀರ್ತಿ, ಬಂಧುಗಳಿಂದ ಸಹಾಯ. ಷಷ್ಠೇಶನು ದುರ್ಬಲನಿದ್ದರೆ ಅಪಕೀರ್ತಿ, ಬಂಧುಗಳಿಂದ ತೊಂದರೆ, ಶತ್ರುಗಳಿಂದ ಹಾನಿ, ಆರೋಗ್ಯಕ್ಕೆ ಹಾನಿದಾಯಕವು.

ಸಿಂಹ ಹಾಗೂ ಕನ್ಯಾ ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ, ಷಷ್ಠೇಶನು ದುರ್ಬಲನಿದ್ದರೆ ಎಲ್ಲ ರೀತಿಯಿಂದಲೂ ಹಾನಿದಾಯಕ.

ಕುಂಭ ಹಾಗೂ ಮೀನ ಲಗ್ನದ ಷಷ್ಠೇಶನ ಮೇಲಿಂದ ಶನಿಯು ಭ್ರಮಿಸುವಾಗ ಚೋರಭಯ, ಅಗ್ನಿಭಯ, ಶತ್ರುಗಳಿಂದ ಹಾನಿ, ಅಪಘಾತ ಮೊದಲಾದ ಸಂಗತಿಗಳು ಜರುಗುತ್ತವೆ.

## ೭

ಮೇಷ ಹಾಗೂ ವೃಶ್ಚಿಕ ಲಗ್ನದ ಸಪ್ತಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಸಪ್ತಮೇಶನು ಬಲವಂತನಿದ್ದರೆ ವ್ಯಾಪಾರ ಉದ್ಯೋಗದಲ್ಲಿ ಲಾಭ, ಮೊದಲ ಪ್ರವಾಸ ಕಾರಣದಿಂದ ಅನುಕೂಲ. ವೈವಾಹಿಕ ಜೀವನಕ್ಕೆ ಅನುಕೂಲ, [illegible] ಲಾಭ, ವಾದ ಸ್ಪರ್ಧೆಯಲ್ಲಿ ಯಶಸ್ಸು, ಸಪ್ತಮೇಶನು ದುರ್ಬಲನಿದ್ದರೆ ಮೇಲೆ ತೋರಿಸಿದ ಎಲ್ಲ ರಂಗಗಳಲ್ಲಿ ಹಾನಿ.

ಆಗುವದಲ್ಲದೆ ವೈವಾಹಿಕ ಜೀವನಕ್ಕೆ ಗಂಡಾಂತರ, ಪತಿಪತ್ನಿಯರಲ್ಲಿ ಭಿನ್ನಾಭಿಪ್ರಾಯ, ಘಟಸ್ಫೋಟ, ಹಾಗೂ ಪರಸ್ತ್ರೀ-ಪರಪುರುಷರ ಸಹವಾಸ ವಾಗುವ ಸಂಭವ.

ವೃಷಭ ಹಾಗೂ ತುಲಾ ಲಗ್ನದ ಸಪ್ತಮೇಶನ ಮೇಲಿಂದ ಶನಿಯು ಭ್ರಮಿಸುವಾಗ, ಕೋರ್ಟು-ಕಚೇರಿಯಲ್ಲಿ ಹಾನಿ, ದಂಡ, ಜೇಲು ಶಿಕ್ಷೆ, ವ್ಯಾಪಾರದಲ್ಲಿ ಹಾನಿ, ವಿವಾಹವಾಗಲು ಆತಂಕ, ಪತಿ-ಪತ್ನಿಯರಲ್ಲಿ ಭಿನ್ನಾಭಿಪ್ರಾಯ, ವೈವಾಹಿಕ ಜೀವನಕ್ಕೆ ಗಂಡಾಂತರ, ಘಟಸ್ಫೋಟ, ವ್ಯಾಜ್ಯ, ಪುನರ್ವಿವಾಹ. ಹಾಗೂ ದ್ವಿಭಾರ್ಯಾಯೋಗ.

ಮಿಥುನ ಹಾಗೂ ಕನ್ಯಾ ಲಗ್ನದ ಸಪ್ತಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಸಪ್ತಮೇಶನು ಬಲವಂತನಿದ್ದರೆ, ವಾಹನ ಸೌಖ್ಯ, ಸ್ಥಾವರ ಆಸ್ತಿಯಲ್ಲಿ ಲಾಭ, ನೌಕರರಿಗೆ ಬಡತಿ, ಹಾಗೂ ಅಧಿಕಾರ ಪ್ರಾಪ್ತಿ, ವರಿಷ್ಠ ಅಧಿಕಾರಗಳಿಂದ ಮನ್ನಣೆ, ದುರ್ಬಲನಿದ್ದರೆ ವೈವಾಹಿಕ ಜೀವನಕ್ಕೆ ಗಂಡಾಂತರ, ವಿವಾಹವಾಗಲು ಆತಂಕ ಹಾಗೂ ಮೇಲೆ ತೋರಿಸಿದ ಎಲ್ಲ ಸಂಗತಿಗಳಲ್ಲಿ ಹಾನಿದಾಯಕವು.

ಮಕರ ಹಾಗೂ ಕುಂಭ ಲಗ್ನದ ಸಪ್ತಮಾಧಿಪನ ಮೇಲಿಂದ ಶನಿಯು ಭ್ರಮಿಸುವಾಗ, ವ್ಯಾಪಾರ ಉದ್ಯೋಗದಲ್ಲಿ ಹಾನಿ, ಕೋರ್ಟು-ಕಚೇರಿಯ ಕೆಲಸದಲ್ಲಿ ಹಾನಿ, ಶಿಕ್ಷೆ, ದಂಡ, ವಿವಾಹವಾಗಲು ಆತಂಕ, ವಿಘ್ನ, ವೈವಾಹಿಕ ಜೀವನಕ್ಕೆ ಗಂಡಾಂತರ.

ಧನು, ಮೀನ ಲಗ್ನದ ಸಪ್ತಮಾಧಿಪನ ಮೇಲಿಂದ ಶನಿಯು ಭ್ರಮಿಸುವಾಗ ಸಪ್ತಮಾಧಿಪನು ಬಲವಂತನಿದ್ದರೆ ವಿಶೇಷ ವ್ಯಾಪಾರದಲ್ಲಿ [illegible] ಲಾಭ, ಕೋರ್ಟು-ಕಚೇರಿಯ ಕೆಲಸದಲ್ಲಿ ಜಯ, ವಾಹನ ಸೌಖ್ಯ, ಸ್ಥಾವರ ಆಸ್ತಿ ಲಾಭ, ನೌಕರಿಯಲ್ಲಿ ಯಶ, ವೈವಾಹಿಕ ಜೀವನದಲ್ಲಿ ಅನುಕೂಲ, ಸಪ್ತಮೇಶನು ದುರ್ಬಲನಿದ್ದರೆ ಮೇಲೆ ತೋರಿಸಿದ ಎಲ್ಲ ಕ್ಷೇತ್ರಗಳಲ್ಲಿ ಹಾನಿ.

ಮೇಷ ಹಾಗೂ [illegible] ಲಗ್ನದ ಸಪ್ತಮೇಶನು ಬಲವಂತನಿದ್ದರೆ ಅವನ ಮೇಲಿಂದ ಶನಿಯು [illegible], ವ್ಯಾಪಾರ ಉದ್ಯೋಗದಲ್ಲಿ ಯಶ, [illegible]

ಕೆಲಸ ಮಾಡುವವರಿಗೂ ಒಕ್ಕಲುತನವನ್ನು ಮಾಡುವವರಿಗೂ ಅನುಕೂಲ. ವೈವಾಹಿಕ ಜೀವನದಲ್ಲಿ ಅನುಕೂಲ, ದುರ್ಬಲನಿದ್ದರೆ ಮೇಲೆ ಬರೆದ ಎಲ್ಲ ಸಂಗತಿಗಳಲ್ಲೂ ಹಾನಿ.

## ೮

ಮೇಷ ಹಾಗೂ ಕನ್ಯಾ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ, ಆಕಸ್ಮಿಕ ಹಾಗೂ ಅಕಲ್ಪಿತವಾಗಿ ಆರೋಗ್ಯಕ್ಕೆ ತೊಂದರೆ, ಕಾರ್, ಸಾಯಕಲ್ ಇವುಗಳಿಂದ ಅಪಘಾತ, ಚೋರಭಯ, ಅಗ್ನಿಭಯ ಹಾಗೂ ಕೊಲೆ ಮುಂತಾದ ಸಂಗತಿಗಳು ಜರುಗುವ ಸಂಭವ. ವ್ಯಾಪಾರ ಉದ್ಯೋಗದಲ್ಲಿ ಹಾನಿ, ವಿಶೇಷವಾಗಿ ಸಟ್ಟಾ ಲಾಟರಿ, ರೋಕ ವ್ಯಾಪಾರಸ್ಥರಿಗೂ ಹಾನಿ, ಪಿತ್ರಾರ್ಜಿತ ಆಸ್ತಿಯು ಹಾನಿ.

ವೃಷಭ ಹಾಗೂ ಸಿಂಹ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ಅಷ್ಟಮೇಶನು ಬಲವಂತನಿದ್ದರೆ ವಿದ್ಯಾಭ್ಯಾಸ ಪ್ರಗತಿ, ಸಂತತೀ ಸೌಖ್ಯ, ಉತ್ತಮ ಮಿತ್ರರಿಂದ ಸಹಾಯ; ದುರ್ಬಲನಿದ್ದರೆ ಮೇಲೆ ಬರೆದ ಎಲ್ಲ ಸಂಗತಿಗಳಿಗೂ ಹಾನಿ, ಹಾಗೂ ಅಪಚನ, ಅಶಕ್ತತೆ ಮೊದಲಾದ ರಕ್ತ ನ್ಯೂನತೆಯ ರೋಗಗಳಿಂದ ಬಾಧೆ.

ಮಿಥುನ ಹಾಗೂ ಕರ್ಕ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಅಷ್ಟಮೇಶನು ಬಲವಂತನಿದ್ದರೆ ಭಾಗ್ಯವೃದ್ಧಿ, ದೂರದ ಪ್ರವಾಸ (ವಿದೇಶ ಯಾತ್ರೆ) ವ್ಯಾಪಾರ ಉದ್ಯೋಗದಲ್ಲಿ ಲಾಭ, ವಿಶೇಷವಾಗಿ ಬೇಸಾಯಗಾರರಿಗೆ ಹೆಚ್ಚು ಅನುಕೂಲ. ದುರ್ಬಲನಿದ್ದರೆ ವೈವಾಹಿಕ ಜೀವನಕ್ಕೆ ವಿಘ್ನ, ದೂರದ ಪ್ರವಾಸದಲ್ಲಿ ಹಾನಿ, ವ್ಯಾಪಾರ ಉದ್ಯೋಗದಲ್ಲಿ ಹಾನಿ

ತುಲಾ ಹಾಗೂ ಮೀನ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಅಷ್ಟಮೇಶನು ಬಲವಂತನಿದ್ದರೆ, ಆಕಸ್ಮಿಕವಾಗಿ ದ್ರವ್ಯಲಾಭ ವಾಗುತ್ತದೆ. ವಿಶೇಷವಾಗಿ ಆಕಾಶವಾಣಿ ಕಲಾಕಾರ ವರ್ಗದವರಿಗೆ ಆಕಸ್ಮಿಕ ಲಾಭ ಹಾಗೂ ಕೀರ್ತಿ, ಸರಕಾರದಿಂದ ಬಹುಮಾನ ಹಾಗೂ ಹಣದ ಸಹಾಯ

ಸಿಗುತ್ತದೆ. ಅಷ್ಟಮೇಶನು ದುರ್ಬಲನಿದ್ದರೆ ಪರಸ್ತ್ರೀ ಹಾಗೂ ಪರಪುರುಷರ ಸಹವಾಸ, ಅಪಮಾನ, ಆಕಸ್ಮಿಕವಾಗಿ ದ್ರವ್ಯಹಾನಿ (ರೇಸು ಜೂಜುಗಳಿಂದ).

ವೃಶ್ಚಿಕ ಹಾಗೂ ಕುಂಭ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಅಷ್ಟಮೇಶನು ಬಲವಂತನಿದ್ದರೆ ಲೇಖಕರಿಗೂ ಸಾಹಿತ್ಯ ವರ್ಗದವರಿಗೂ (ಕುಂಭ ಲಗ್ನದವರಿಗೆ ಹೆಚ್ಚು) ವಿಶೇಷವಾಗಿ ಆಕಸ್ಮಿಕ ಧನ ಲಾಭ. ಸಟ್ಟಾ-ಲಾಟರಿಗಳಿಂದ ದ್ರವ್ಯಲಾಭ, ಕಲಾಕಾರರಿಗೆ ಲಾಭ, ಅಷ್ಟಮೇಶನು ದುರ್ಬಲನಿದ್ದರೆ ವಿದ್ಯೆಯಲ್ಲಿ ಅಪಯಶ, ಲೇಖನೀ ವ್ಯವಸಾಯದಲ್ಲಿ ಹಾನಿ, ಸಂತತೀ ಸೌಖ್ಯಕ್ಕೆ ವಿಘ್ನ, ಆಕಸ್ಮಿಕ ದ್ರವ್ಯ ಹಾನಿ, ಮಾಟ, ಚಿಟಾಟಿ ಮೊದಲಾದವುಗಳ ಬಾಧೆ, ತಲೆಗೆ ಆಘಾತವಾಗಿ ಹುಚ್ಚು ಹಿಡಿಯುವ ಸಂಭವ

ಧನು ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಆರ್ಥಿಕ, ಮಾನಸಿಕ, ಶಾರೀರಿಕ ಹೀಗೆ ಎಲ್ಲ ರೀತಿಯಿಂದ ಹಾನಿ

ಮಕರ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಆಕಸ್ಮಿಕವಾಗಿ ದ್ರವ್ಯ ಹಾನಿ, ಆರೋಗ್ಯಕ್ಕೆ ತೊಂದರೆ, ವಿಶೇಷವಾಗಿ ಅಪಘಾತವಾಗುವ ಸಂಭವ, ಮಕರ ಲಗ್ನದ ಅಷ್ಟಮೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿಶೇಷವಾಗಿ ರಾಜಕೀಯ ವರ್ಗದವರಿಗೂ, ಸರಕಾರಿ ನೌಕರದಾರರಿಗೂ ಆಕಸ್ಮಿಕವಾಗಿ ದ್ರವ್ಯಹಾನಿ. ನೌಕರದಾರರಿಗೆ ಹಿಂಬಡತಿ, ಸಸ್ಪೆಂಡ, ಶಿಕ್ಷೆ, ದಂಡ ಮೊದಲಾದ ಸಂಗತಿಗಳು ಜರುಗುವವು.

## ೯

ಮೇಷ ಹಾಗೂ ಕರ್ಕ ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ಭಾಗ್ಯೇಶನು ಬಲವಂತನಿದ್ದರೆ ಭಾಗ್ಯವೃದ್ಧಿಯಾಗುತ್ತದೆ. ವಿವಾಹ ಮೊದಲಾದ ಮಂಗಲಕಾರ್ಯಗಳು ಜರುಗುತ್ತವೆ. ಪುತ್ರ ಹಾಗೂ ಪಿತೃ ಸೌಖ್ಯ ಉತ್ತಮ, ಆಕಸ್ಮಿಕವಾಗಿ ದ್ರವ್ಯಲಾಭ, ಮಾನ ಮರ್ಯಾದೆಯು ಲಭಿಸುತ್ತದೆ. ಚುನಾವಣೆ-ಸ್ಪರ್ಧೆಯಲ್ಲಿ ಯಶ, ಸರಕಾರದಿಂದ ಲಾಭ, ಪರದೇಶ ಪ್ರಯಾಣ, ತೀರ್ಥಯಾತ್ರಾ ಸಂದರ್ಶನ (ದೂರದ ಪ್ರವಾಸ) ಸಂಭವಿಸುತ್ತವೆ. ಭಾಗ್ಯೇಶನು ದುರ್ಬಲನಿದ್ದರೆ ಮೇಲೆ ಬರೆದ ಎಲ್ಲ ಕ್ಷೇತ್ರಗಳಲ್ಲಿ ಹಾನಿ,

ವೃಷಭ ಲಗ್ನಕ್ಕೆ ಶನಿಯ ಯೋಗಕಾರಕನು. ಭಾಗ್ಯೇಶನ ಮೇಲೆ ಶನಿಯ ಪರಿಭ್ರಮಣವು ಲಾಭದಾಯಕವು. ಭಾಗ್ಯೇಶನು ಬಲವಂತನಿದ್ದರೆ ಆರ್ಥಿಕ, ಶಾರೀರಿಕ, ಮಾನಸಿಕ, ಹೀಗೆ ಎಲ್ಲ ರೀತಿಯಲ್ಲಿ ಭಾಗ್ಯೋದಯವಾಗುತ್ತದೆ, ಹಾಗೂ ತೀರ್ಥಯಾತ್ರಾ ಸಂದರ್ಶನವಾಗುತ್ತದೆ. ಭಾಗ್ಯೇಶನು ದುರ್ಬಲನಿದ್ದರೆ ಆಕಸ್ಮಿಕವಾಗಿ ಎಲ್ಲ ರೀತಿಯಿಂದ ಹಾನಿಯಾಗುತ್ತದೆ.

ಮಿಥುನ ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ವೃಷಭ ಲಗ್ನದಂತೆಯೇ ಫಲಗಳು ದೊರೆಯುತ್ತವೆ.

ಸಿಂಹ ಹಾಗೂ ಮೀನ ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ಆಕಸ್ಮಿಕ ಪಿತ್ರಾರ್ಜಿತದಲ್ಲಿ ಹಾನಿ ಮಾತೃ-ಪಿತೃ ಸೌಖ್ಯಕ್ಕೆ ವಿಘ್ನ, ಸ್ಥಾವರದಲ್ಲಿ ಹಾನಿ, ವಾಹನಗಳಿಂದ ಅಪಘಾತ ಸಂಭವ.

ಕನ್ಯಾ ಹಾಗೂ ಕುಂಭ ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ಭಾಗ್ಯೇಶನು ಬಲವಂತನಿದ್ದರೆ ದೂರದ ಪ್ರವಾಸ, ತೀರ್ಥಯಾತ್ರಾ ಸಂದರ್ಶನ ಲಾಭ, ಮಾತೃ - ಸೌಖ್ಯ ಉತ್ತಮ. ಪಿತ್ರಾರ್ಜಿತ ಆಸ್ತಿಯ ಲಾಭ. ಆಕಸ್ಮಿಕ ದ್ರವ್ಯ ಲಾಭ. ಸ್ಥಾವರ ಇಸ್ಟೇಟನಲ್ಲಿ ಲಾಭ, ವಾಹನ ಸೌಖ್ಯ ಉತ್ತಮ. ಸಾಮಾಜಿಕ ಕೆಲಸದಲ್ಲಿ ಮಾನ-ಸನ್ಮಾನ, ಸರಕಾರದಿಂದ ಬಹು-ಮಾನ ಹಾಗೂ ಮಾನ-ಸನ್ಮಾನ. ಭಾಗ್ಯೇಶನು ದುರ್ಬಲನಿದ್ದರೆ ಮೇಲೆ ಬರೆದ ಎಲ್ಲ ಕೆಲಸಗಳಲ್ಲಿ ಹಾನಿ.

ತುಲಾ ಹಾಗೂ ಮಕರ ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ಭಾಗ್ಯೇಶನು ಬಲವಂತನಿದ್ದರೆ ವ್ಯಾಪಾರಸ್ಥರಿಗೂ ಸಾಹಿತಿಗಳಿಗೂ ಲೇಖಕರಿಗೂ ಆಕಸ್ಮಿಕವಾಗಿ ಭಾಗ್ಯವೃದ್ಧಿಯಾಗುತ್ತದೆ. ಭಾಗ್ಯೇಶನು ದುರ್ಬಲನಿದ್ದರೆ ಆಕಸ್ಮಿಕವಾಗಿ ಹಾನಿ, ಶತ್ರುಗಳಿಂದ ಹಾನಿ, ಮಾನಸಿಕ ತೊಂದರೆ, ಜೇಲು, ದಂಡ ಹಾಗೂ ಆರೋಗ್ಯಕ್ಕೆ ಹಾನಿ.

ವೃಶ್ಚಿಕ ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ಆರೋಗ್ಯ, ಆರ್ಥಿಕ ಹಾಗೂ ಮಾನಸಿಕ ಎಲ್ಲ ರೀತಿಯಿಂದಲೂ ಬಹು ಶ್ರಮದಿಂದ ದೂರದ ಪ್ರವಾಸವಾಗುತ್ತದೆ. ಆಕಸ್ಮಿಕವಾಗಿ ದ್ರವ್ಯಹಾನಿ.

ಧನು ಲಗ್ನದ ಭಾಗ್ಯೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿಶೇಷವಾಗಿ ಸರಕಾರಿ ನೌಕರರಿಗೂ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರಿಗೂ ಹಾನಿ, ನೌಕರವಾರರಿಗೆ ಶಿಕ್ಷೆ, ದಂಡ, ಹಿಂಬಡತಿ ಮೊದಲಾದವು ಜರುಗುವವಲ್ಲದ ವರಿಷ್ಠ ಅಧಿಕಾರಿಗಳೊಂದಿಗೆ ಭಿನ್ನಾಭಿಪ್ರಾಯವುಂಟಾಗುತ್ತದೆ.

೧೦

ಮೇಷ ಹಾಗೂ ವೃಷಭ ಲಗ್ನದ ದಶಮೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ವ್ಯಾಪಾರ, ಉದ್ಯೋಗ ಹಾಗೂ ನೌಕರಿಯಲ್ಲಿ ಲಾಭವಾಗುತ್ತದೆ.

ಮೀನ ಹಾಗೂ ಮಿಥುನ ಲಗ್ನದ ದಶಮೇಶನ ಮೇಲಿಂದ ಶನಿಯು ಭ್ರಮಿಸುವಾಗ ದಶಮೇಶನು ಬಲಾಢ್ಯನಾಗಿದ್ದರೆ ವೈವಾಹಿಕ ಜೀವನದಲ್ಲಿ ಪ್ರಗತಿ, ಪಿತೃ ಸುಖ ಉತ್ತಮ, ಕೋರ್ಟು-ಕಚೇರಿ ಕೆಲಸದಲ್ಲಿ ಅನುಕೂಲ, ದೂರದ ಪ್ರವಾಸ (ವಿದೇಶ ಪ್ರಯಾಣ), ಪತ್ನಿಯಿಂದ ಆರ್ಥಿಕ ಲಾಭ, ನೌಕರದಾರರಿಗೆ ಬಡತಿ ಹಾಗೂ ಅಧಿಕಾರ ಪ್ರಾಪ್ತಿ.

ಕರ್ಕ ಲಗ್ನದ ದಶಮೇಶನ ಮೇಲಿಂದ ಶನಿಯು ಭ್ರಮಿಸುವಾಗ ದಶಮೇಶನು ಬಲಾಢ್ಯನಿದ್ದು ಅವನದೇ ಮಹರ್ದಶೆ ನಡೆಯುತ್ತಿದ್ದರೆ ವಾದ-ಸ್ಪರ್ಧೆಯಲ್ಲಿ ಯಶ, ಕೀರ್ತಿ. ದಶಮೇಶನು ದುರ್ಬಲನಿದ್ದರೆ ವ್ಯಾಪಾರ ಉದ್ಯೋಗದಲ್ಲಿ ಹಾನಿ, ನೌಕರದಾರರಿಗೆ ಮೇಲಧಿಕಾರಿಗಳೊಂದಿಗೆ ಮನಸ್ತಾಪ, ಭಿನ್ನಾಭಿಪ್ರಾಯ, ವಿಶೇಷವಾಗಿ ತಾಂತ್ರಿಕ ಮಶಿನರಿ ಮಿಲಿಟರೀ ಪೋಲೀಸ್ ವೈಮಾನಿಕ ಕೆಲಸಗಾರರಿಗೆ ಹಾನಿ.

ಸಿಂಹ ಹಾಗೂ ಮಕರ ಲಗ್ನದ ದಶಮೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ದಶಮೇಶನು ಬಲಾಢ್ಯನಿದ್ದರೆ ಪುತ್ರ ಹಾಗೂ ಪಿತೃ ಸುಖ ಉತ್ತಮ. ನೌಕರದಾರರಿಗೆ ಬಡತಿ ಹಾಗೂ ಅಧಿಕಾರ ಪ್ರಾಪ್ತಿ. ವಿಶೇಷವಾಗಿ ಕಲಾಕಾರ ವರ್ಗದವರಿಗೆ ಅನುಕೂಲ. ದಶಮೇಶನು ದುರ್ಬಲನಿದ್ದರೆ ಮೇಲೆ ಬರೆದ ಎಲ್ಲ ಕ್ಷೇತ್ರಗಳಲ್ಲಿ ಹಾನಿ.

ಧನು ಹಾಗೂ ಕನ್ಯಾ ಲಗ್ನದ ದಶಮೇಶನ ಮೇಲಿಂದ ಶನಿಯು ಭ್ರಮಿಸುವಾಗ ದಶಮೇಶನು ಬಲಾಢ್ಯನಿದ್ದರೆ ವ್ಯಾಪಾರ–ಉದ್ಯೋಗಸ್ಥ, ಹಾಗೂ ನೌಕರಿ ಹೀಗೆ ಎಲ್ಲ ವರ್ಗದವರಿಗೂ ಲಾಭ. ಪಿತೃ ಸುಖ ಉತ್ತಮ, ಆರೋಗ್ಯ ಉತ್ತಮ, ದಶಮೇಶನು ದುರ್ಬಲನಿದ್ದರೆ ಎಲ್ಲ ರೀತಿಯಿಂದಲೂ ಹಾನಿ.

ತುಲಾ ಲಗ್ನದ ದಶಮೇಶನ ಮೇಲಿಂದ ಶನಿಯು ಭ್ರಮಿಸುವಾಗ ಪಿತೃ ಸುಖಕ್ಕೆ ಹಾನಿ, ವ್ಯಾಪಾರ. ಉದ್ಯೋಗ, ನೌಕರದಾರರಿಗೆ ಹಾನಿ, ವಿಶೇಷವಾಗಿ ನೌಕರದಾರರಿಗೆ ಲಂಚ ಮೊದಲಾದವುಗಳಿಂದ ಶಿಕ್ಷೆ, ದಂಡ ಹಿಂಬಡತಿ ಆಗುವ ಸಂಭವವಿರುತ್ತದೆ.

ವೃಶ್ಚಿಕ ಲಗ್ನದ ದಶಮೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿಶೇಷವಾಗಿ ಪಿತೃಸುಖಕ್ಕೆ ವಿಘ್ನ. ಪಿತೃವಿನೊಂದಿಗೆ ಮನಸ್ತಾಪ, ಭಿನ್ನಾಭಿಪ್ರಾಯ. ನೌಕರರ ವರ್ಗದವರಿಗೆ ಶಿಕ್ಷೆ, ದಂಡ, ಹಿಂಬಡತಿ, ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರಿಗೂ ನ್ಯಾಯಖಾತೆಯ ಕೆಲಸಗಾರರಿಗೂ ವಿಶೇಷವಾಗಿ ವಕೀಲರಿಗೂ ಹಾನಿಯಾಗುವದು.

ಕುಂಭ ಲಗ್ನದ ದಶಮೇಶನ ಮೇಲಿಂದ ಶನಿಯು ಭ್ರಮಿಸುವಾಗ ವ್ಯಾಪಾರ–ಉದ್ಯೋಗ, ಹಾಗೂ ನೌಕರದಾರರಿಗೂ ಹಾನಿ, ವಿಶೇಷವಾಗಿ ಭ್ರಾತೃ ಹಾಗೂ ಭಾಗಾದಿಯರಿಂದ ಹಾನಿ.

## ೧೧

ಮೀನ ಹಾಗೂ ಮೇಷ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಎಲ್ಲ ರೀತಿಯಿಂದಲೂ ಲಾಭ, ವಿಶೇಷವಾಗಿ ಮಿತ್ರ ವರ್ಗದವರಿಂದ ಲಾಭ.

ವೃಷಭ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಅಷ್ಟೊಂದು ಲಾಭವಾಗುವದಿಲ್ಲ. ಲಾಭೇಶನು ದುರ್ಬಲನಿದ್ದರಂತೂ ಆರೋಗ್ಯಕ್ಕೆ ಹಾನಿದಾಯಕ, ಹಾಗೂ ಮಿತ್ರರಿಂದ ವಂಚನೆ.

ಕುಂಭ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಾಭೇಶನು ಬಲವಂತನಿದ್ದರೆ ಪಿತ್ರಾರ್ಜಿತ ಆಸ್ತಿಯ (ಸ್ಥಾವರ ಹಾಗೂ ಜಂಗಮ) ಲಾಭ, ಲೇಖನೀ ಕೆಲಸದಲ್ಲಿ ಲಾಭ, ಮಿತ್ರ ವರ್ಗದವರಿಂದಲೂ ಲಾಭ. ಲಾಭೇಶನು ದುರ್ಬಲನಿದ್ದರೆ ಪಿತ್ರಾರ್ಜಿತ ಆಸ್ತಿಯು ಹಾನಿಯಾಗುತ್ತದೆ.

ಮಿಥುನ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಮಿತ್ರರು ಸಹ ಶತ್ರುಗಳಾಗುತ್ತಾರೆ. ಚೋರಭಯ; ಅಗ್ನಿಭಯ ಹಾಗೂ ಕೋರ್ಟ್ ಹಾಗೂ ಅಪಘಾತದ ಭಯವಿರುತ್ತದೆ. ವಿಶೇಷವಾಗಿ ಶತ್ರುಗಳಿಂದ ಹಾನಿ. ಮಿತ್ರರಿಂದ ವಂಚನೆ.

ಕರ್ಕ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಾಭೇಶನು ಬಲವಂತನಿದ್ದರೆ ಮಾತೃ ಸೌಖ್ಯ ಉತ್ತಮ, ಸ್ಥಾವರ ಇಸ್ಟೇಟಿನ ಸಂಪಾದನೆ, ವಾಹನ ಸೌಖ್ಯ, ಮಿತ್ರರಿಂದ ಬೇಕಾದಷ್ಟು ಸಹಾಯ, ಎಲ್ಲ ರೀತಿಯಿಂದಲೂ ಲಾಭ. ಲಾಭೇಶನು ದುರ್ಬಲನಿದ್ದರೆ ಈ ಮೇಲಿನ ಎಲ್ಲ ರಂಗಗಳಲ್ಲಿಯೂ ಹಾನಿ.

ಸಿಂಹ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಾಭೇಶನು ಬಲವಂತನಿದ್ದರೆ ಆಕಸ್ಮಿಕವಾಗಿ ಪಿತ್ರಾರ್ಜಿತ (ಸ್ಥಾವರ ಹಾಗೂ ಜಂಗಮ) ಆಸ್ತಿಯ ಲಾಭ, ಮಿತ್ರ ವರ್ಗದವರಿಂದ ಲಾಭ, ಭಾಷಣ ಹಾಗೂ ಸ್ಪರ್ಧೆಯಲ್ಲಿ ಯಶ. ಲಾಭೇಶನು ದುರ್ಬಲನಿದ್ದರೆ ಆಕಸ್ಮಿಕವಾಗಿ ಪಿತ್ರಾರ್ಜಿತ ಆಸ್ತಿಯ ಹಾನಿ. ಮಿತ್ರರು ಶತ್ರುಗಳಾಗುತ್ತಾರೆ, ಹಣಕಾಸಿನ ವ್ಯವಹಾರದಲ್ಲಿ ಇರುವವರಿಗೂ ಹಣಕಾಸಿನ ಖಾತೆಗಳ ಪೋತದಾರರಿಗೂ ವಿಶೇಷವಾಗಿ ಹಾನಿ.

ಕನ್ಯಾ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಮಿತ್ರರಿಂದ ವಂಚನೆ, ಮಿತ್ರರು ಶತ್ರುಗಳಾಗುತ್ತಾರೆ. ಅನೇಕ ರೀತಿಯಲ್ಲಿ ಹಾನಿದಾಯಕ. ಆಕಸ್ಮಿಕವಾಗಿ ಜಾಮೀನು ಹಾಗೂ ಮಧ್ಯಸ್ಥಿಕೆಯಿಂದ ಹಣದ ಅಪವ್ಯಯ, ದಂಡ, ಶಿಕ್ಷೆಗಳಾಗುವ ಸಂಭವ.

ತುಲಾ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಮಿತ್ರರಿಂದ ಹಾನಿ. ವಿಶೇಷವಾಗಿ ಮೇಲಧಿಕಾರಿಗಳಿಂದಲೂ ಸರಕಾರದ ದೊಡ್ಡ ವರ್ಗದಿಂದಲೂ ಹಾನಿ, ರಾಜಕೀಯ ರಂಗದ [illegible] ಕಾರ್ಯಕರ್ತರಿಗೆ ಆಕಸ್ಮಿಕವಾಗಿ ಹಣದ ಅಪವ್ಯಯ.

ವೃಶ್ಚಿಕ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಲಾಭೇಶನು ಬಲವಂತನಿದ್ದರೆ ಮಿತ್ರ ಸುಖ ಉತ್ತಮ. ಬಹುಮುಖದಿಂದ ಹಾಗೂ ಆಕಸ್ಮಿಕವಾಗಿ ಆರ್ಥಿಕ ಲಾಭ. ಲಾಭೇಶನು ದುರ್ಬಲನಿದ್ದರೆ ಆಕಸ್ಮಿಕವಾಗಿ ಆರ್ಥಿಕ ಹಾನಿಯಾಗುತ್ತದೆ. ಹಾಗೂ ಮಿತ್ರರಿಂದ ವಂಚನೆ, ಹಾನಿ.

ಧನು ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಅಷ್ಟೊಂದು ಲಾಭದಾಯಕವಾಗುವದಿಲ್ಲ. ಲಾಭೇಶನು ದುರ್ಬಲನಿದ್ದರೆ ಶತ್ರುಗಳಿಂದ ಹಾನಿ, ಮಿತ್ರರು ಶತ್ರುಗಳಾಗುತ್ತಾರೆ. ಚೋರಭಯ ಹಾಗೂ ಅಗ್ನಿಭಯವಿರುತ್ತದೆ.

ಮಕರ ಲಗ್ನದ ಲಾಭೇಶನ ಮೇಲಿಂದ ಶನಿಯು ಭ್ರಮಿಸುವಾಗ ಮಿತ್ರರು ಶತ್ರುಗಳಾಗುತ್ತಾರೆ. ವಿಶೇಷವಾಗಿ ಮಾತೃ ಸೌಖ್ಯಕ್ಕೆ ವಿಘ್ನ, ತಾಯಿಯೊಂದಿಗೆ ಭಿನ್ನಾಭಿಪ್ರಾಯ, ಮನಸ್ತಾಪ, ಏಕತ್ರ ಕುಟುಂಬಕ್ಕೆ ಹಾನಿ. ಸ್ಥಾವರ ಇಸ್ಟೇಟಿನಲ್ಲಿ ಹಾನಿ, ವಿಶೇಷವಾಗಿ ವಾಹನ ಭಯ.

## ೧೨

ಮೇಷ ಹಾಗೂ ಮಕರ ಲಗ್ನದ ವ್ಯಯೇಶನ ಮೇಲಿಂದ ಶನಿಯ ಪರಿಭ್ರಮಣವಾಗುವಾಗ ವ್ಯಯೇಶನು ಬಲಾಢ್ಯನಿದ್ದರೆ ದೂರದ ಪ್ರವಾಸ (ವಿದೇಶ ಯಾತ್ರೆ) ತೀರ್ಥಯಾತ್ರಾ ಸಂದರ್ಶನ. ಭಾಗ್ಯವೃದ್ಧಿ. ವ್ಯಯೇಶನು ದುರ್ಬಲನಿದ್ದರೆ ಜಾಮೀನು ಹಾಗೂ ಮಧ್ಯಸ್ಥಿಕೆಯಿಂದ ಹಣದ ಅಪವ್ಯಯ, ಭ್ರಾತೃ-ಭಾಗಾದಿಯರಿಂದ ಹಾನಿಯಾಗುತ್ತದೆ, ಎಲ್ಲ ರೀತಿಯಿಂದಲೂ ಅಭಾಗಿಯಾಗುತ್ತಾರೆ.

ವೃಷಭ ಲಗ್ನದ ವ್ಯಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ವ್ಯಾಪಾರದಲ್ಲಿ ಆಕಸ್ಮಿಕವಾಗಿ ಹಾನಿಯಾಗುತ್ತದೆ. ಕೋರ್ಟ-ಕಚೇರಿ ಕೆಲಸದಲ್ಲಿ ಹಾನಿ, ಶಿಕ್ಷೆ, ದಂಡ ಮತ್ತು ಅಪಮಾನವಾಗುವ ಸಂಭವ. ವೈವಾಹಿಕ

ಜೀವನದಲ್ಲಿ ತೊಂದರೆ, ಸತಿ-ಪತಿಯರಲ್ಲಿ ವಿರಸ, ಮನಸ್ತಾಪ. ದೂರದ ಪ್ರವಾಸಕ್ಕಾಗಿ ಹಣದ ಅಪವ್ಯಯ.

ಧನು ಲಗ್ನದ ವ್ಯಯೇಶನ ಮೇಲಿಂದ ಶನಿಯ ಪರಿಭ್ರಮಣವಾಗು-ವಾಗ ಪುತ್ರರ ಸುಖಕ್ಕೆ ವಿಘ್ನ. ಪೋಸ್ಟ್-ಬ್ಯಾಂಕ ಮೊದಲಾದವುಗಳಲ್ಲಿ ಇಟ್ಟ ಠೇವು ಹಣದ ಅಪವ್ಯಯ. ಜಾಮೀನ ಮಧ್ಯಸ್ಥಿಕೆಯಿಂದಲೂ ಅಪಘಾತಗಳಿಂದಲೂ ಹಣದ ಮುಗ್ಗಟ್ಟು ಆಗುತ್ತದೆ.

ಕರ್ಕ ಲಗ್ನದ ವ್ಯಯೇಶನ ಮೇಲಿಂದ ಶನಿಯು ಭ್ರಮಿಸುವಾಗ ವಿಶೇಷವಾಗಿ ಹಾನಿಯಾಗುವುದೇ ಹೆಚ್ಚು.

ಸಿಂಹ ಲಗ್ನದ ವ್ಯಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ತಲೆಗೆ ಅಘಾತವಾಗುತ್ತದೆ. ವಿಶೇಷವಾಗಿ ಮಾನಸಿಕ ಸ್ಥಿತಿಯು ಮೇಲೆ ಹೆಚ್ಚು ಪರಿಣಾಮವಾಗುತ್ತದೆ.

ಕನ್ಯಾ ಲಗ್ನದ ವ್ಯಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ವಿಶೇಷವಾಗಿ ರಾಜಕೀಯ ಸಾಮಾಜಿಕ ವರ್ಗದವರಿಗೆ ಅಕಸ್ಮಿಕವಾಗಿ ಹಾನಿ. ಸರಕಾರೀ ನೌಕರದಾರರಿಗೆ ಹಿಂಬಡತಿ, ಶಿಕ್ಷೆ, ದಂಡಗಳಾಗುವ ಸಂಭವ.

ತುಲಾ ಲಗ್ನದ ವ್ಯಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ವಿಶೇಷವಾಗಿ ದೂರದ ಪ್ರವಾಸ ಸಂಭವ ಹೆಚ್ಚು.

ವೃಶ್ಚಿಕ ಲಗ್ನದ ವ್ಯಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ವ್ಯಯೇಶನು ಬಲವಂತನಿದ್ದರೆ ವ್ಯಾಪಾರ-ಉದ್ಯೋಗದಲ್ಲಿ ಹಾಗೂ ಕೋರ್ಟು-ಕಚೇರಿಯ ಕೆಲಸದಲ್ಲಿ ಲಾಭ. ವೈವಾಹಿಕ ಜೀವನದಲ್ಲಿ ಅನುಕೂಲ. ವ್ಯಯೇಶನು ದುರ್ಬಲನಿದ್ದರೆ ಕೋರ್ಟು-ಕಚೇರಿಯ ಕೆಲಸದಲ್ಲಿ ಶಿಕ್ಷೆ, ದಂಡ, ಅಪಮಾನ, ಪತಿ-ಪತ್ನಿಯರಲ್ಲಿ ವಿರಸ, ಮನಸ್ತಾಪವಾಗಿ ವೈವಾಹಿಕ ಜೀವನ ದಲ್ಲಿ ತೊಂದರೆ, ಪರಸ್ತ್ರೀಯರಿಂದ ಹಾನಿ.

ಮಿಥುನ ಲಗ್ನದ ವ್ಯಯೇಶನ ಮೇಲಿಂದ ಶನಿಯು ಭ್ರಮಿಸುವಾಗ ವ್ಯಯೇಶನು ಬಲಾಢ್ಯನಿದ್ದರೆ ಅಕಸ್ಮಿಕವಾಗಿ ದ್ರವ್ಯಲಾಭ. ವಿದ್ಯಾಭ್ಯಾಸದಲ್ಲಿ (ವಿಶೇಷ ಕಲಾಕಾರರಿಗೆ) ತೀರ್ಥಯಾತ್ರಾ ದರ್ಶನ. ವ್ಯಯೇಶನು ದುರ್ಬಲ ನಿದ್ದರೆ ಪೋಸ್ಟ್, ಬ್ಯಾಂಕ ಮೊದಲಾದವುಗಳಲ್ಲಿ ಠೇವು ಆಗಿ ಇಟ್ಟ ಹಣದ ಅಪವ್ಯಯ.

ಮಕರ ಹಾಗೂ ಕುಂಭ ಲಗ್ನದ ವ್ಯಯೇಶನ ಮೇಲಿಂದ ಶನಿಯು ಪರಿಭ್ರಮಿಸುವಾಗ ವ್ಯಯೇಶನು ಬಲವಂತನಿದ್ದರೆ ಎಲ್ಲ ರೀತಿಯಿಂದಲೂ ಭಾಗ್ಯೋದಯ. ವ್ಯಯೇಶನು ದುರ್ಬಲನಿದ್ದರೆ ಪಿತ್ರಾರ್ಜಿತ ಆಸ್ತಿಯ ಹಾನಿ.

## ದಶಾ ಪದ್ಧತಿಯಿಂದ ಸಾಡೇಸಾತಿಯ ವಿಚಾರ

ಸಾಡೇಸಾತಿಯ ಕಾಲದಲ್ಲಿ ದಶಾ ಅಂತರದಶೆಯ ವಿಚಾರವು ಬಹಳ ಮಹತ್ವದ್ದು ಇರುತ್ತದೆ. ನಮ್ಮ ಪುರಾತನ ಜ್ಯೋತಿಷ್ಯ ಶಾಸ್ತ್ರಜ್ಞರು ಗೋಚರಿ ಗ್ರಹಗಳಿಗೆ ಮಹತ್ವ ಕೊಡದೆ ದಶಾ ಅಂತರ ದಶೆಗಳಿಗೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ದಶಾ, ಅಂತರ ದಶೆಗಳು ಅನುಕೂಲವಿದ್ದರೆ ಸಾಡೇಸಾತಿಯ ಪರಿಣಾಮವು ಬಹಳಷ್ಟು ಕಡಿಮೆಯಾಗುತ್ತದೆ ಎಂದು ಅವರ ಅಭಿಪ್ರಾಯವಿದೆ. ನಾವು ಅನೇಕ ಕುಂಡಲಿಗಳನ್ನು ಅವಲೋಕಿಸಿದ್ದು ಈ ಮಾತಿನ ಸತ್ಯಾಂಶವು ತಿಳಿದುಬಂದಿದೆ.

ದಶಾ ಪದ್ಧತಿಯು ಬಹಳ ಕ್ಲಿಷ್ಟಕರದು. ಇದರ ನಿರ್ಣಯಕ್ಕೆ ದೀರ್ಘ ವ್ಯಾಸಂಗವೂ ಬೇಕು. ಗುರು ಶುಭಗ್ರಹ, ಶನಿ ಪಾಪಗ್ರಹ, ಆದುದರಿಂದ ಗುರುವಿನ ದಶೆ ಶುಭವೂ ಶನಿಯ ದಶೆ ಅಶುಭವೂ ಅಂತಾ ತಿಳಿಯುವುದು ಶಾಸ್ತ್ರಸಮ್ಮತವಲ್ಲ. ಇಲ್ಲಿ ಬಹಳಷ್ಟು ತಾಂತ್ರಿಕವ್ಯಾಪಿತೆ. ಇದಕ್ಕಾಗಿ ನಾವು ಪ್ರತ್ಯೇಕವಾಗಿ ದಶಾ ದರ್ಪಣವೆಂಬ ಗ್ರಂಥವನ್ನು ಪ್ರಕಟಿಸುವವರಿದ್ದೇವೆ. ಪ್ರಸ್ತುತ ಈ ವಿಷಯಕ್ಕೆ ಬೇಕಾಗುವ ದಶಾ ಮಾರ್ಗದರ್ಶಿಗಳ ವಿಚಾರವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ಯೋಗಕಾರಕವೆಂದು ಹಿಂದೆ ಹೇಳಲಾಗಿದೆ (ಎನೇ ಪ್ರಕರಣದಲ್ಲಿ)

ಈ ಯೋಗಕಾರಕ ಗ್ರಹಗಳ ದಶಾ ಅಂತರದಶೆ ನಡೆಯುತ್ತಿದ್ದರೆ ಸಾಡೇಸಾತಿಯ ಪರಿಣಾಮ ಬಹಳಷ್ಟು ಕಡಿಮೆ ಆಗುತ್ತದೆ. ಉದಾ:—ಮೇಷ ಲಗ್ನದ ಒಂದು ಕುಂಡಲಿ ಇದೆ ಅಂತಾ ಕಲ್ಪಿಸಿರಿ. ಈ ಲಗ್ನಕ್ಕೆ ಗುರು, ರವಿ, ಮಂಗಳ ಇವರು ಯೋಗಕಾರಕರು. ಮೂಲ ಕುಂಡಲಿಯಲ್ಲಿ ಈ ಗ್ರಹಗಳು

ಬಲವತ್ತರವಿದ್ದು, ಅವುಗಳದೇ ದಶೆ, ಮಹದ್ದಶೆ ನಡೆಯುತ್ತಿದ್ದರೆ ಸಾಡೇ ಸಾತಿಯ ಪರಿಣಾಮವು ಬಹಳಷ್ಟು ಕಡಿಮೆಯಾಗುತ್ತದೆ.

ಇನ್ನು ಎರಡನೆಯದಾಗಿ ಮೂಲ ಕುಂಡಲಿಯಲ್ಲಿ ಯೋಗಕಾರಕ ಗ್ರಹಗಳು ಬಲವತ್ತರವಿದ್ದು ಆಯಾ ಗ್ರಹಗಳ ದಶಾ ಅಂತರ ದಶಾ ನಡೆಯುತ್ತಿದ್ದಾಗ ಆಯಾ ಗ್ರಹಗಳ ಭಾವಕ್ಕೆ ಆಗಬೇಕಾಗುವಂಥ ಹಾನಿದಾಯಕವೂ ಕೂಡ ಕಡಿಮೆ ಆಗುತ್ತದೆ. ಉದಾ: —ಮೀನ ಲಗ್ನದ ಧನು ರಾಶಿಯಲ್ಲಿ ಗುರು ಇರುವ ಒಂದು ಕುಂಡಲಿ ಇದೆ ಅಂತಾ ತಿಳಿಯಿರಿ. ಮೀನ ಈ ಲಗ್ನಕ್ಕೆ ಗುರು ಈ ಗ್ರಹವು ಯೋಗಕಾರಕನು. ಸಾಡೇಸಾತಿಯಲ್ಲಿ ಕೂಡ ಗುರುದಶೆ ನಡೆಯುತ್ತಿದ್ದರೆ ಈ ಲಗ್ನಕ್ಕೆ ಗುರುವಿನ ಭಾವಗಳಾದ ತನು ಮತ್ತು ದಶಮ ಭಾವಗಳ ಮೇಲೆ ಹಾನಿದಾಯಕವಾಗದು.

## ಗರ್ಭಗತ ಸಾಡೇಸಾತಿ

ಗರ್ಭದಿಂದಲೇ ಸಾಡೇಸಾತಿಯು ಪ್ರಾರಂಭವಾದರೆ ತಾಯಿಯ ಪ್ರಕೃತಿಯ ಮೇಲೆ ಬಹಳ ಪರಿಣಾಮವಾಗುವದು. ಹಲಿವುಳಿವಿಕೆಯು(Abortion) ಪ್ರಸಂಗವು ಬರಬಹುದಾಗಿದೆ.

ಗರ್ಭಗತವಾಗಿ ಸಾಡೇಸಾತಿ ಇದ್ದರೆ, ಪ್ರಸವದ ಕಾಲಕ್ಕೆ ಬಹಳ ವೇದನೆ ಉಂಟಾಗಬಹುದು. ಅಲ್ಲದೆ, ಕೂಸು ಹಾಗೂ ತಾಯಿ ಇಬ್ಬರೂ ಬದುಕುವದು ಕಠಿಣವಾಗುತ್ತದೆ. ಮತ್ತು ಕೆಲವೊಮ್ಮೆ ಪ್ರಸೂತಿಯ ಕಾಲಕ್ಕೆ ಶಸ್ತ್ರಕ್ರಿಯೆ ಮಾಡಬೇಕಾಗುತ್ತದೆ.

**ಜನ್ಮಾರಭ್ಯ ಸಾಡೇಸಾತಿ:**—ಜನನದಿಂದಲೇ ಸಾಡೇಸಾತಿ ಆರಂಭವಾದರೆ ಅಂತಹ ಕೂಸುಗಳ ಆರೋಗ್ಯಕ್ಕೆ ಧಕ್ಕೆ ಬರುವದು. ಅಷ್ಟೇ ಅಲ್ಲದೆ, ಮೂರು ವರುಷ ಸಹ ಬದುಕುವ ಭರವಸೆಯಿರುವದಿಲ್ಲ. ಇಂತಹ ಕೂಸುಗಳ ಜಾತಕಗಳಲ್ಲಿ ಚಂದ್ರನ ಬಲಾಬಲ ಹಾಗೂ ರವಿ,ಲಗ್ನೇಶ, ಅಷ್ಟಮೇಶ ಮತ್ತು ಲಗ್ನ-ಅಷ್ಟಮ ಸ್ಥಾನ ಇವುಗಳ ಬಲಾಬಲಗಳ ಮೇಲೆ ವಿಚಾರ

ಆಯುಷ್ಯವನ್ನು ಕುರಿತು ನಿರ್ಧರಿಸಲು ಬರುತ್ತದೆ. ಇವುಗಳ ವಿವರಗಳನ್ನು ನಮ್ಮ 'ಆರೋಗ್ಯ ಜ್ಯೋತಿಷ್ಯ' ಗ್ರಂಥದಲ್ಲಿ ವಿವೇಚಿಸಲಾಗಿದೆ.

**ಶಿಶುವಿನ ಮೇಲೆ ಸಾಡೇಸಾತಿ:**—ಶಿಶುಗಳು ೩ ವರ್ಷದಿಂದ ೧೨-ವರ್ಷದವರೆಗಿರುವಾಗ ಸಾಡೇಸಾತಿ ಆರಂಭವಾದರೆ ಅವುಗಳ ಬೆಳವಣಿಗೆಯ ಮೇಲೆ ಹೆಚ್ಚು ಪರಿಣಾಮವುಂಟಾಗುತ್ತದೆ. ಮಾತು ಬೇಗ ಬಂದಿರುವದು, ಉಚ್ಚಾರದಲ್ಲಿ ಅಸ್ಪಷ್ಟತೆ, ತೊದಲು ನುಡಿ, ಕಾಲು ಬರದಿರುವದು, ಇವು ಗಳೇ ಕೆಲವು ಮುಖ್ಯ ಪರಿಣಾಮಗಳು

೧೩ನೇ ವಯಸ್ಸಿನಿಂದ ೧೯ನೇ ವಯಸ್ಸಿನವರೆಗಿನ ಅವಧಿಯಲ್ಲಿ ಸಾಡೇ ಸಾತಿ ಆರಂಭವಾದರೆ, ವಿದ್ಯಾರ್ಜನೆಗೆ ಅಡ್ಡಿ ಬರುವುದಲ್ಲದೆ ಸ್ವಭಾವದಲ್ಲಿ ಉದ್ಧಟತನ, ಅವಿಧೇಯತೆ, ಅಸಭ್ಯವರ್ತನೆ, ಕೆಟ್ಟ ನಡವಳಿಕೆ ಮುಂತಾದವು ಗಳು ಕಂಡುಬರುತ್ತವೆ. ಇಂತಹ ಸಂದರ್ಭದಲ್ಲಿ ಅನೇಕ ಮಂದಿ ಮನೆಯಿಂದ ಪಲಾಯನ ಮಾಡುವ ಪ್ರಸಂಗವೂ ಬರುವದು.

೨೦ನೇ ವಯಸ್ಸಿನಿಂದ ೨೮ರ ವರೆಗಿನ ಅವಧಿಯಲ್ಲಿ ಸಾಡೇಸಾತಿ ಆರಂಭ ವಾದರೆ, ನಿರುದ್ಯೋಗ, ಅಸ್ಥಿರತೆ, ಅಶಾಂತತೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಆರ್ಥಿಕ ಮುಗ್ಗಟ್ಟಿನ ವಿಂತಾದ ಫಲಗಳು ಉಂಟಾಗುವವು.

೨೮ರ ನಂತರ ೩೬ರ ಒಳಗಿನ ಅವಧಿಯಲ್ಲಿ ಆರಂಭವಾದ ಸಾಡೇಸಾತಿ ವೈವಾಹಿಕ ಜೀವನಕ್ಕೆ, ೩೬ ರ ನಂತರ ೬೦ ರೊಳಗಿನ ಅವಧಿಯಲ್ಲಿ ಆರ್ಥಿಕ ಪರಿಸ್ಥಿತಿಯ ಮೇಲೆಯೂ ಮತ್ತು ಅನಂತರದಲ್ಲಿ ದೇಹ ಪ್ರಕೃತಿಯ ಮೇಲೆಯೂ ದುಷ್ಪರಿಣಾಮ ಬೀರುವದು.

# ೧೦. ಸಾಡೇಸಾತಿ ಸಮಯದಲ್ಲಿ ಆಗುವ ಕೆಲವು ಅನುಭವಸಿದ್ಧ ನಿಯಮಗಳು

೧. ಅಗ್ನಿ ಇಲ್ಲವೆ ಜಲರಾಶಿಯ ಲಗ್ನದಲ್ಲಿ ರವಿ ಇಲ್ಲವೆ ಮಂಗಳ ಇದ್ದು, ಗೋಚರೀ ಶನಿಯ ಪರಿಭ್ರಮಣವು ಲಗ್ನದ ಮೇಲಿಂದ ಆಗುವಾಗ ಆರೋಗ್ಯಕ್ಕೆ ಹಾನಿದಾಯಕವು.

೨. ಧನು ಅಥವಾ ಮಕರ ಲಗ್ನದ ವ್ಯಯಸ್ಥಾನದಲ್ಲಿ ರವಿ ಮಂಗಳ ಇದ್ದು, ಗೋಚರೀ ಶನಿಯ ಪರಿಭ್ರಮಣವು ವ್ಯಯಸ್ಥಾನ ಮೇಲಿಂದ ಆಗು–ವಾಗ ಆರ್ಥಿಕ ಸ್ಥಿತಿಯು ಚಿಂತಾಜನಕವಾಗುತ್ತದೆ.

೩. ಅಗ್ನಿ ಇಲ್ಲವೆ ಜಲರಾಶಿಯ ರವಿ-ಕೇತು, ರವಿ-ಚಂದ್ರ, ಚಂದ್ರ-ಮಂಗಳ, ರಾಹು-ಚಂದ್ರ, ರವಿ-ಮಂಗಳ ಇವಾವದೋಂದು ಜೋಡಿಯು ವ್ಯಯಸ್ಥಾನದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣವು ಅವರ ಮೇಲಿಂದ ಆಗುವಾಗ ರಾಜದಂಡ, ಮಾನಹಾನಿ, ಕಾರಾಗೃಹವಾಸ ಮುಂತಾದ ಅಪಮಾನಕಾರಕ ಸಂಗತಿಗಳು ಜರುಗುತ್ತವೆ

೪. ಅಗ್ನಿ ರಾಶಿಯ ಮಂಗಳನು ಚತುರ್ಥದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣವು ಮಂಗಳನ ಮೇಲಿಂದ ಆಗುತ್ತಿದ್ದಾಗ ಏಕತ್ರ ಕುಟುಂಬದಲ್ಲಿ ಐಕ್ಯತೆ ಉಳಿಯುವುದಿಲ್ಲ ಹಾಗೂ ಮಾತೃಸುಖಕ್ಕೆ ತೊಂದರೆ, ವಾಹನ-ಗಳಿಂದ ಅಪಘಾತ, ಕೋರ್ಟು-ಕಚೇರಿ ಕೆಲಸಗಳಲ್ಲಿ ಅಪಜಯವಾಗುತ್ತದೆ.

೫. ಧನು ರಾಶಿಯ ಮಂಗಳನು ಚತುರ್ಥದಲ್ಲಿದ್ದು ಶನಿಯು ಪರಿಭ್ರಮಣವು ಅವನ ಮೇಲಿಂದ ಆಗುತ್ತಿದ್ದರೆ ಅಥವಾ ಮಂಗಳನೊಂದಿಗೆ ಗೋಚರಿಯಿಂದ ಸಮಸಪ್ತಕವಾಗುತ್ತಿದ್ದರೆ ಸ್ಕೂಟರ್, ಕಾರು, ಸಾಯಿಕಲ್ಲ, ಮುಂತಾದ ವಾಹನಗಳಿಂದ ಅಪಘಾತವಾಗುತ್ತದೆ.

೬. ಅಗ್ನಿ ಅಥವಾ ಜಲರಾಶಿಯ ಕ್ಷೀಣ ಚಂದ್ರನು ಷಷ್ಠದಲ್ಲಿದ್ದು ಗೋಚರೀ ಶನಿಯ ಪರಿಭ್ರಮಣ ಷಷ್ಠ ಸ್ಥಾನದ ಮೇಲಿಂದ ಆಗುವಾಗ ಚೋರಭಯವಿರುತ್ತದೆ.

೭. ಅಗ್ನಿ ಹಾಗೂ ಜಲರಾಶಿಯ ಕ್ಷೀಣ ಮಂಗಳನು ಷಷ್ಠದಲ್ಲಿದ್ದು ಗೋಚರೀ ಶನಿಯ ಪರಿಭ್ರಮಣವು ಷಷ್ಠ ಸ್ಥಾನದ ಮೇಲಿಂದ ಆಗುತ್ತಿದ್ದಾಗ ಅಗ್ನಿಭಯ ಹಾಗೂ ಚೋರಭಯವಿರುತ್ತದೆ.

೮. ರವಿ, ಮಂಗಳ, ಚಂದ್ರ ಯಾರೊಬ್ಬರು ಲಗ್ನ, ಪಂಚಮ, ಸಪ್ತಮ, ಚತುರ್ಥ ಈ ಯಾವದೇ ಸ್ಥಾನದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣ ಅವರ ಮೇಲಿಂದ ಆಗುವಾಗ ವೈವಾಹಿಕ ಜೀವನಕ್ಕೆ ತೊಂದರೆ ದಾಯಕವಾಗುತ್ತದೆ.

೯. ಅನೇಕ ಪಾಪಗ್ರಹಗಳು ಲಗ್ನ ಇಲ್ಲವೆ ಸಪ್ತಮದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣವು ಸಪ್ತಮ ಸ್ಥಾನದ ಮೇಲಿಂದ, ಆಗುವಾಗ ವೈವಾಹಿಕ ಜೀವನಕ್ಕೆ ವಿಘ್ನ ಬರುತ್ತದೆ.

೧೦. ಮೂಲ ಕುಂಡಲಿಯಲ್ಲಿ ಯಾವದೇ ಗ್ರಹವು ನೀಚ, ವಕ್ರೀ, ಶತ್ರುಕ್ಷೇತ್ರಿ, ಅಸ್ತಂಗತ ಹೀಗೆ ದುರ್ಬಲನಾಗಿ ಪಂಚಮ ಸ್ಥಾನದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣವು ಪಂಚಮದಲ್ಲಿ ಆಗುತ್ತಿದ್ದಾಗ ಶಿಕ್ಷಣಕ್ಕೆ ವಿಘ್ನಗಳು ಬಂದು ಶಿಕ್ಷಣ ಅರ್ಧಕ್ಕೇ ನಿಲ್ಲುತ್ತದೆ.

೧೧. ಪಂಚಮ, ಸಪ್ತಮ, ಅಷ್ಟಮ, ದ್ವಾದಶ ಈ ಯಾವದೊಂದು ಸ್ಥಾನದಲ್ಲಿ ಜಲರಾಶಿಯ ಶುಕ್ರ-ಮಂಗಳ, ಚಂದ್ರ-ಮಂಗಳ, ಶುಕ್ರ-ಚಂದ್ರರಿದ್ದು, ಗೋಚರೀ ಶನಿಯ ಪರಿಭ್ರಮಣವು ಅದರ ಮೇಲಿಂದ ಆಗುವಾಗ ಪರಸ್ತ್ರೀ ಅಥವಾ ಪರಪುರುಷರ ಸಹವಾಸವಾಗುತ್ತದೆ. ಹಾಗೂ ನೈತಿಕ ಸ್ಥಿತಿ ಅಧೋಗತಿಗೆ ಇಳಿಯುತ್ತದೆ.

೧೨. ಯಾವದೆ ರಾಶಿಯ ರಾಹು ಪಂಚಮದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣವು ಅವನ ಮೇಲಿಂದ ಆಗುವಾಗ ಗರ್ಭಪತನದ ಭೀತಿ ಇರುತ್ತದೆ.

೧೩. ಪಂಚಮ ಅಥವಾ ಷಷ್ಠದಲ್ಲಿ ರಾಹು-ಚಂದ್ರ, ಅಥವಾ ರಾಹು ಮಂಗಳರಿದ್ದು, ಗೋಚರೀ ಶನಿಯ ಪರಿಭ್ರಮಣವು ಅವರ ಮೇಲಿಂದ ಆಗುವಾಗ ಹೊಟ್ಟೆಯ ಆಪರೇಷನ್ ಮಾಡಿಸಿಕೊಳ್ಳುವ ಪ್ರಸಂಗ ಬರುತ್ತದೆ.

೧೪. ಷಷ್ಠದಲ್ಲಿ ರಾಹು, ಚಂದ್ರ, ರಾಹು-ಮಂಗಳ, ಚಂದ್ರ-ಮಂಗಳರಿದ್ದು, ಗೋಚರೀ ಶನಿಯ ಪರಿಭ್ರಮಣ ಅವರ ಮೇಲಿಂದ ಆಗುವಾಗ ಅಗ್ನಿ ಭೀತಿ, ಚೋರಭೀತಿ ಮೊದಲಾದ ಹಾನಿಯಾಗುತ್ತದೆ.

೧೫. ವೃಶ್ಚಿಕ ರಾಶಿಯು ಷಷ್ಠ ಇಲ್ಲವೆ ಅಷ್ಟಮ ಸ್ಥಾನದಲ್ಲಿ ಶನಿ-ಮಂಗಳರಿದ್ದು ಗೋಚರೀ ಶನಿಯ ಪರಿಭ್ರಮಣವು ಅವರ ಮೇಲಿಂದ ಆಗುವಾಗ ಮೂಲವ್ಯಾಧಿಯ ಭೀತಿ ಇರುತ್ತದೆ.

೧೬. ಜಲರಾಶಿಯು ಮಂಗಳನು ಷಷ್ಠ ಇಲ್ಲವೆ ಅಷ್ಟಮದಲ್ಲಿದ್ದು ಗೋಚರೀ ಶನಿಯ ಪರಿಭ್ರಮಣವು ಅವನ ಮೇಲಿಂದ ಆಗುವಾಗ ಆರೋಗ್ಯಕ್ಕೆ ಹಾನಿಯಾಗುತ್ತದೆ.

೧೭. ಕ್ಷೀಣ ಚಂದ್ರನು ಷಷ್ಠ ಇಲ್ಲವೆ ಅಷ್ಟಮದಲ್ಲಿದ್ದು ಗೋಚರೀ ಶನಿಯ ಪರಿಭ್ರಮಣ ಅವನ ಮೇಲಿಂದ ಆಗುವಾಗ ರಕ್ತ ನ್ಯೂನತೆ ಇಲ್ಲವೆ ಕ್ಷಯ ರೋಗದ ಭೀತಿ ಇರುತ್ತದೆ

೧೮. ರವಿ, ಚಂದ್ರ, ಮಂಗಳರಲ್ಲಿ ಯಾವುದೇ ಎರಡು ಗ್ರಹಗಳು ಲಗ್ನ, ಸಪ್ತಮ, ಪಂಚಮ ಈ ಯಾವದೊಂದು ಸ್ಥಾನದಲ್ಲಿದ್ದು ಗೋಚರೀ ಶನಿಯ ಪರಿಭ್ರಮಣವು ಅವರ ಮೇಲಿಂದ ಆಗುವಾಗ ವೈವಾಹಿಕ ಜೀವನಕ್ಕೆ ತೊಂದರೆಯುಂಟಾಗುತ್ತದೆ.

೧೯. ತೃತೀಯದಲ್ಲಿ ರಾಹು, ಚತುರ್ಥದಲ್ಲಿ ಮಂಗಳ, ದಶಮದಲ್ಲಿ ಶನಿ ಇದ್ದು ಗೋಚರೀ ಶನಿಯ ಪರಿಭ್ರಮಣವು ತೃತೀಯ-ಚತುರ್ಥದಲ್ಲಿ ಆಗುವಾಗ ಮಾತಾಪಿತೃ ಸೌಖ್ಯದ ಅಭಾವವಾಗುತ್ತದೆ.

೨೦. ಸಿಂಹ ರಾಶಿಯು ಚಂದ್ರ ದಶಮದಲ್ಲಿದ್ದು, ಗೋಚರೀ ಶನಿಯ ಪರಿಭ್ರಮಣವು ಭಾಗ್ಯ ಹಾಗೂ ದಶಮದಲ್ಲಿ ಆಗುವಾಗ ಪಿತೃ ಸೌಖ್ಯಕ್ಕೆ ತೊಂದರೆಯಾಗುತ್ತದೆ.

—o—

# ೧೧. ಸಾಡೇಸಾತಿಯ ಮಾದರಿಯ ಕುಂಡಲಿಗಳು

ಈ ಪ್ರಕರಣದಲ್ಲಿ ಅಧ್ಯಾಸಕ್ಕೆ ಉಪಯುಕ್ತವಾಗುವಂತೆ ಕೆಲವು ಮಾದರಿ ಕುಂಡಲಿಗಳನ್ನು ಕೊಟ್ಟು ವಿವೇಚಿಸಲಾಗಿದೆ.

ಮಾದರಿ ೧.

ನಂ. ೧

| | | | |
|---|---|---|---|
| | | ಲಗ್ನ | |
| X | ವೃಷಭಲಗ್ನ | | |
| X | | | |
| | | | |

ನಂ. ೨

| | | | |
|---|---|---|---|
| | | | X |
| X | ತುಲಾಲಗ್ನ | | |
| X | | | |
| | | ಲಗ್ನ | |

ಮೇಲೆ ತೋರಿಸಿದ ಕುಂಡಲಿಯ ಬಗ್ಗೆ ವಿಚಾರಿಸುವಾ.

ವೃಷಭ ಲಗ್ನದ ಮೊದಲನೇ ಕುಂಡಲಿಗೆ ಶನಿಯು ಯೋಗಕಾರಕನು. ಭಾಗ್ಯಾಧಿಪತಿಯೂ ದಶಮಾಧಿಪತಿಯೂ (ಕೇಂದ್ರ ತ್ರಿಕೋಣಾಧಿಪತಿತ್ವ) ಆದ ಶನಿಯು ಭಾಗ್ಯದಲ್ಲಾಗಲಿ ದಶಮದಲ್ಲಾಗಲಿ ಇದ್ದು, ಶನಿಯ ಮಹಾದಶೆ ಇದ್ದರೆ ಸಾಡೇಸಾತಿಯ ಅನಿಷ್ಟ ಪರಿಣಾಮವಾಗುವದಿಲ್ಲ.

ತುಲಾ ಲಗ್ನದ ಎರಡನೆಯ ಕುಂಡಲಿಗೆ ಶನಿಯು ಯೋಗಕಾರಕನು (ಕೇಂದ್ರ ತ್ರಿಕೋಣಾಧಿಪತಿ). ಈ ಲಗ್ನದ ಕುಂಡಲಿಯಲ್ಲಿ ಮೇಲೆ ಗುರುತು ಹಾಕಿದ ಸ್ಥಳದಲ್ಲಿ ಶನಿಯು ಇದ್ದರೆ, ಅಂದರೆ ಲಗ್ನ, ಚತುರ್ಥ, ಪಂಚಮ ಭಾಗ್ಯ ಈ ಯಾವುದೆ ಸ್ಥಾನದಲ್ಲಿದ್ದು ಶನಿಯ ಮಹಾದಶೆ ಇದ್ದರೆ ಸಾಡೇಸಾತಿಯು ಅನಿಷ್ಟ ಪರಿಣಾಮವಾಗುವದಿಲ್ಲ.

**ಮಾದರಿ ೨**

ನಂ ೩

| | | | |
|---|---|---|---|
| | X | | |
| | ಧನುಲಗ್ನ | | X |
| | | | |
| ಲಗ್ನ | X | | |

ನಂ. ೪.

| | | | |
|---|---|---|---|
| | | | |
| | ಮಕರಲಗ್ನ | | |
| ಲಗ್ನ | | | X |
| X | | | |

ಈ ಮೂರನೇ ಕುಂಡಲಿಗೆ ಶನಿಯ ಗೋಚಾರ ಪರಿಭ್ರಮಣವು ಅಷ್ಟಮ ಹಾಗೂ ದ್ವಾದಶದಲ್ಲಿ ಆಗುತ್ತಿದ್ದಾಗ ಗೋಚರಿಯಿಂದ (ರಾಶಿ-ಯಲ್ಲಿ) ೩--೬--೧೦_೧೧ನೇ ಶನಿ ಯಾದರೂ ಶುಭವನ್ನು ಕೊಡದೆ ಸಾಡೇಸಾತಿಯಂತೆ ಅನಿಷ್ಟಪ್ರದಾಯಕನಾಗುತ್ತಾನೆ. ಕಾರಣವಿಷ್ಟೇ, ಧನಾಧೀಶನ ಗೋಚಾರ ಪರಿಭ್ರಮಣ ಅಷ್ಟಮ ಹಾಗೂ ದ್ವಾದಶದಲ್ಲಿ ಆಗುವುದರಿಂದ.

ಮೇಲೆ ಹೇಳಿದಂತೆ ೪ನೆಯ ಕುಂಡಲಿಗೆ ಸಹ ಶನಿಯ ಪರಿಭ್ರಮಣವು ಅಷ್ಟಮ ಹಾಗೂ ದ್ವಾದಶದಲ್ಲಿ ಆಗುವಾಗ ೩-೬-೧೦--೧೧ನೇ (ಗೋಚರಿಯಿಂದ) ಶನಿ ಬಂದರೂ ಕೂಡ ಸಾಡೇಸಾತಿಯಂತೆ ಅನಿಷ್ಟ ಫಲ-ವನ್ನು ಕೊಡುತ್ತಾನೆ. ಲಗ್ನಾಧೀಶನ ಹಾಗೂ ಧನಾಧೀಶನ ಪರಿಭ್ರಮಣವು ಅಷ್ಟಮ ಹಾಗೂ ದ್ವಾದಶದಲ್ಲಿದ್ದರೆ ಏನು ಪ್ರಯೋಜನ ?

ಮುಂದೆ ತೋರಿಸಿದ ೫ ನೇ ನಂಬರಿನ ಕುಂಡಲಿಗೆ ಶುಕ್ರನು ಯೋಗ-ಕಾರಕನು. ಲಗ್ನಾಧೀಶನ ಮಿತ್ರನೂ ಕೇಂದ್ರ ತ್ರಿಕೋಣಾಧೀಶನೂ ಆದ ಶುಕ್ರನು ಬಲವಂತನಾಗಿ ಅಸ್ತ-ವಕ್ರೀ ಇಲ್ಲದ ಮೇಲೆ ಗುಣಾರೀ ಹಾದ ಅಂದರೆ ಲಗ್ನ, ದ್ವಿತೀಯ, ಪಂಚಮ, ದಶಮ ಈ ಯಾವದೊಂದು ಸ್ಥಾನ

ದಲ್ಲಿ (ಮೂಲ ಕುಂಡಲಿಯಲ್ಲಿ) ಇದ್ದು ಶುಕ್ರನದೇ ಮಹಾದಶೆ ನಡೆಯುತ್ತಿದ್ದರೆ ಸಾಡೇಸಾತಿಯ ಅನಿಷ್ಟ ಪರಿಣಾಮವಾಗುವದಿಲ್ಲ.

**ಮಾದರಿ ೩**

ನಂ. ೫

| | | | |
|---|---|---|---|
| X | | X | |
| X | ಮಕರಲಗ್ನ | | |
| ಲಗ್ನ X | | | |
| | | X | |

ನಂ. ೬

| | | | |
|---|---|---|---|
| | | X | X |
| | ಕನ್ಯಾಲಗ್ನ | | |
| X | | | |
| | | X | ಲಗ್ನ X |

ಮೇಲೆ ತೋರಿಸಿದ ೬ ನೇ ನಂಬರಿನ ಕುಂಡಲಿಗೆ ಬುಧನು ಯೋಗಕಾರಕನು. ಲಗ್ನ ಹಾಗೂ ದಶಮಾಧೀಶನಾದ ಬುಧನು ಬಲಾಢ್ಯನಾಗಿ ಮೇಲೆ ಗುಣಲೇ ಹಾಕಿದ ಲಗ್ನ, ದ್ವಿತೀಯ, ಪಂಚಮ, ಭಾಗ್ಯ, ದಶಮ ಈ ಯಾವುದೇ ಒಂದು ಸ್ಥಾನದಲ್ಲಿದ್ದು (ಮೂಲ ಕುಂಡಲಿಯಲ್ಲಿ), ಬುಧನದೇ ಮಹಾದಶೆ ನಡೆಯುತ್ತಿದ್ದರೆ ಸಾಡೇಸಾತಿಯ ಪರಿಣಾಮವಾಗುವದಿಲ್ಲ.

ಈ ಮುಂದೆ ತೋರಿಸಿದ ೭ನೆಯ ನಂಬರಿನ ಕುಂಡಲಿಯನ್ನು ನೋಡಿರಿ. ಯಾವುದೇ ಲಗ್ನ ಹಾಗೂ ಯಾವುದೇ ರಾಶಿಯವರಿಗೆ ರವಿ-ಮಂಗಳರ ಸಮಸಪ್ತಕ ಯಾವುದೆ ಸ್ಥಾನದಲ್ಲಿದ್ದರೂ) ಇದ್ದು ಮೂಲ ಕುಂಡಲಿಯಲ್ಲಿ ಗೋಚರೀಯ ಶನಿಯು ಭ್ರಮಣವು ರವಿಯ ಮೇಲಿಂದಾಗಲಿ ಮಂಗಳನ ಮೇಲಿಂದಾಗಲೀ ಆಗುವಾಗ ಸಾಡೇಸಾತಿ ಇರದಿದ್ದರೂ (೧೨-೧-೨-೪-೮ನೇ ಶನಿ) ಸಾಡೇಸಾತಿಗಿಂತ ಹೆಚ್ಚು ಹಾನಿದಾಯಕವಾಗುತ್ತದೆ. ಆದರೆ ಇದರ

ಅವಧಿ ಮಾತ್ರ ೨॥ ವರ್ಷಗಳವರೆಗೆ; ಏಕೆಂದರೆ ಗೋಚರಿಯ ಶನಿಯ ಭ್ರಮಣವು ರವಿ ಮಂಗಳರ ಮೇಲಾಗಲಿ ರವಿ–ಮಂಗಳರ ಸಂಗಡ ಸಮಸಪ್ತಕವಾಗ ತ್ರಿದ್ವಾರಾ ಅಶುಭದಾಯಕವು ಇರುತ್ತದೆ.

ಮಾದರಿ ೪

ನಂ. ೭

| | | | |
|---|---|---|---|
| | | | |
| | ತುಲಾಲಗ್ನ | | ರವಿ |
| ಮಂಗ | | | |
| | | ಲಗ್ನ | |

ನಂ. ೮

| | | | |
|---|---|---|---|
| ರವಿ ಬುಧ | | ಶನಿ ಶುಕ್ರ | |
| ರಾಹು | ಕನ್ಯಾಲಗ್ನ | | |
| ಚಂದ್ರ | | | ಕೇತು |
| ಗುರು | | ಮಂ. | ಲಗ್ನ |

ಮೇಲೆ ತೋರಿಸಿದ ೮ನೆಯ ನಂಬರಿನ ಕುಂಡಲಿಯನ್ನು ನೋಡಿರಿ. ಈ ರಾಶಿಯವರಿಗೆ ಗೋಚರಿಯಿಂದ ೧೦ ನೇ ಶನಿ ಬಂದರೂ ಅಶುಭದಾಯಕನು (ಮಂಗಳನ ಮೇಲಿಂದ ಭ್ರಮಿಸುವ ಕಾರಣ). ಇದರಂತೆ ಗೋಚರಿಯಿಂದ ೩ನೇ ಶನಿ ಬಂದರೂ ಹಾನಿದಾಯಕನು ( ರವಿಯ ಮೇಲಿಂದ ಭ್ರಮಣ ) ಆದರೆ ಅದೇ ೧೨ನೆಯ ಶನಿಯು ಬಂದರೂ ಲಾಭದಾಯಕನು ಮೂಲ ಗುರುವಿನ ಮೇಲಿಂದ ಇರುವುದರಿಂದ, ಮಕರ ರಾಶಿಯ ವರಿಗೆ ೧ನೇ, ೨ನೇ ಶನಿಯು ಹಾನಿದಾಯಕವಾಗುವದಿಲ್ಲ. ಇದರಂತೆ ಪಂಚಮ ಶನಿ ಸಹ ಶುಭನಾಗುತ್ತಾನೆ. ಮೂಲ ಶನಿಯ ಮೇಲಿಂದಲೂ ಶುಕ್ರನ ಮೇಲಿಂದಲೂ ಶನಿಯ ಭ್ರಮಣವು ಶುಭದಾಯಕವು.

**ಮಾದರಿ ೫.**

ನಂ. ೯

| | | | |
|---|---|---|---|
| | | | |
| | ತುಲಾಲಗ್ನ | | |
| | | | |
| | | ಲಗ್ನ ಶ ಮ | |

ನಂ. ೧೦

| | | | |
|---|---|---|---|
| | ಶ. ಮ. | | |
| | ಕರ್ಕಲಗ್ನ | | ಲಗ್ನ |
| | | | |
| | | | |

ಮೇಲೆ ತೋರಿಸಿದ ೯ನೇ ನಂ. ಕುಂಡಲಿಯನ್ನು ನೋಡಿರಿ. ಈ ಕುಂಡಲಿಗೆ ಶನಿಯು ಯೋಗಕಾರಕನು (ಕೇಂದ್ರ ತ್ರಿಕೋಣಾಧೀಶನು). ಶನಿಯ ಮಹಾದಶೆ ಇರುವಾಗ ಗೋಚರಿಯಿಂದ ಶನಿಯು ಪರಿಭ್ರಮಣ ಮಂಗಳನ ಮೇಲೆ ಆಗುವಾಗ ಕೂಡ ಹಾನಿದಾಯಕವಾಗಲಾರದು (ಶನಿಯ ಮೇಲೆ). ಪರಿಭ್ರಮಣವೂ ಉಚ್ಚ ರಾಶಿಯಲ್ಲಿಯೂ ಕೇಂದ್ರದಲ್ಲಿಯೂ ಇರುವುದರಿಂದ ಮಂಗಳನ ಮೇಲಿನ ಗೋಚರೀ ಶನಿಯ ಪರಿಭ್ರಮಣ ಹಾನಿದಾಯಕ ಆಗಲಾರದು. ಆದರೆ ಅದೇ ಶನಿಯ ಪರಿಭ್ರಮಣವು ಮಂಗಳನೊಂದಿಗೆ ಸಮಸಪ್ತಕ ಮಾಡುವಾಗ ಹಾನಿದಾಯಕವಾಗುತ್ತದೆ. ಏಕೆಂದರೆ ಶನಿಯ ಪರಿಭ್ರಮಣ ನೀಚ ರಾಶಿಯಲ್ಲಿಯೂ ಅಗ್ನಿ ರಾಶಿಯಲ್ಲಿ ಶತ್ರು ರಾಶಿಯಲ್ಲಿಯೂ ಮೂಲ ಮಂಗಳನೊಂದಿಗೆ ಸಮಸಪ್ತಕವು ಇರುವುದರಿಂದ ಹಾನಿದಾಯಕವಾಗುತ್ತದೆ. ಸಾಡೇಸಾತಿ ಇದ್ದರಂತೂ ಬಹಳೇ ಹಾನಿದಾಯಕವು.

ಮೇಲೆ ತೋರಿಸಿದ ೧೦ನೆಯ ನಂಬರಿನ ಕುಂಡಲಿಯನ್ನು ನೋಡಿರಿ. ಈ ಕುಂಡಲಿಗೆ ಮಂಗಳನು ರಾಜಯೋಗಕಾರಕನು(ಕೇಂದ್ರ ತ್ರಿಕೋಣಾಧೀಶ)

**ಮಾದರಿ ೨**

ನಂ ೩

| | | | |
|---|---|---|---|
| | X | | |
| | ಧನುಲಗ್ನ | | X |
| | | | |
| ಲಗ್ನ | X | | |

ನಂ. ೪.

| | | | |
|---|---|---|---|
| | | | |
| | ಮಕರಲಗ್ನ | | |
| ಲಗ್ನ | | | X |
| X | | | |

ಈ ಮೂರನೇ ಕುಂಡಲಿಗೆ ಶನಿಯು ಗೋಚರೀ ಪರಿಭ್ರಮಣವು ಅಷ್ಟಮ ಹಾಗೂ ದ್ವಾದಶದಲ್ಲಿ ಆಗುತ್ತಿದ್ದಾಗ ಗೋಚರಿಯಿಂದ (ರಾಶಿಯಲ್ಲಿ) ೩-೬-೧೦-೧೧ನೇ ಶನಿಯಾದರೂ ಲಾಭವನ್ನು ಕೊಡದೆ ಸಾಡೇಸಾತಿಯಂತೆ ಅನಿಷ್ಟಪ್ರದಾಯಕನಾಗುತ್ತಾನೆ. ಕಾರಣವಿಷ್ಟೇ, ಧನಾಧೀಶನ ಗೋಚರೀ ಪರಿಭ್ರಮಣ ಅಷ್ಟಮ ಹಾಗೂ ದ್ವಾದಶದಲ್ಲಿ ಆಗುವುದರಿಂದ.

ಮೇಲೆ ಹೇಳಿದಂತೆ ೪ನೆಯ ಕುಂಡಲಿಗೆ ಸಹ ಶನಿಯು ಪರಿಭ್ರಮಣವು ಅಷ್ಟಮ ಹಾಗೂ ದ್ವಾದಶದಲ್ಲಿ ಆಗುವಾಗ ೩-೬-೧೦-೧೧ನೇ (ಗೋಚರಿಯಿಂದ) ಶನಿ ಬಾಧಕನೂ ಕೂಡ ಸಾಡೇಸಾತಿಯಂತೆ ಅನಿಷ್ಟ ಫಲವನ್ನು ಕೊಡುತ್ತಾನೆ. ಲಗ್ನಾಧೀಶನ ಹಾಗೂ ಧನಾಧೀಶನ ಪರಿಭ್ರಮಣವು ಅಷ್ಟಮ ಹಾಗೂ ದ್ವಾದಶದಲ್ಲಿದ್ದರೆ ಏನು ಪ್ರಯೋಜನ ?

ಮುಂದೆ ತೋರಿಸಿದ ೫ ನೇ ನಂಬರಿನ ಕುಂಡಲಿಗೆ ಶುಕ್ರನು ಯೋಗಕಾರಕನು. ಲಗ್ನಾಧೀಶನ ಮಿತ್ರನೂ ಕೇಂದ್ರ ತ್ರಿಕೋಣಾಧೀಶನೂ ಆದ ಶುಕ್ರನು ಬಲಾಂಶನಾಗಿ ಅಸ್ತ-ವಕ್ರೀ ಇಲ್ಲದ ಮೇಲೆ ಗುಣಗಳೇ ಹಾಂದ ಅಂದರೆ ಲಗ್ನ, ದ್ವಿತೀಯ, ಪಂಚಮ, ದಶಮ ಈ ಯಾವದೊಂದು ಸ್ಥಾನ

ದಲ್ಲಿ (ಮೂಲ ಕುಂಡಲಿಯಲ್ಲಿ) ಇದ್ದು ಶುಕ್ರನದೇ ಮಹಾದಶೆ ನಡೆಯುತ್ತಿದ್ದರೆ ಸಾಡೇಸಾತಿಯು ಅನಿಷ್ಟ ಪರಿಣಾಮವಾಗುವದಿಲ್ಲ.

**ಮಾದರಿ ೩**

ನಂ. ೫

| | | | |
|---|---|---|---|
| X | | X | |
| X | ಮಕರಲಗ್ನ | | |
| ಲಗ್ನ X | | | |
| | | X | |

ನಂ. ೬

| | | | |
|---|---|---|---|
| | | X | X |
| | ಕನ್ಯಾಲಗ್ನ | | |
| X | | | |
| | | X | ಲಗ್ನ X |

ಮೇಲೆ ತೋರಿಸಿದ ೬ ನೇ ನಂಬರಿನ ಕುಂಡಲಿಗೆ ಬುಧನು ಯೋಗಕಾರಕನು. ಲಗ್ನ ಹಾಗೂ ದಶಮಾಧಿಪತಿಯಾದ ಬುಧನು ಬಲಾಢ್ಯನಾಗಿ ಮೇಲೆ ಗುಣಿಲೇ ಹಾಕಿದ ಲಗ್ನ, ದ್ವಿತೀಯ, ಪಂಚಮ, ಭಾಗ್ಯ, ದಶಮ ಈ ಯಾವುದೇ ಒಂದು ಸ್ಥಾನದಲ್ಲಿದ್ದು (ಮೂಲ ಕುಂಡಲಿಯಲ್ಲಿ), ಬುಧನದೇ ಮಹಾದಶೆ ನಡೆಯುತ್ತಿದ್ದರೆ ಸಾಡೇಸಾತಿಯು ಪರಿಣಾಮವಾಗುವದಿಲ್ಲ.

ಈ ಮುಂದೆ ತೋರಿಸಿದ ೭ನೆಯ ನಂಬರಿನ ಕುಂಡಲಿಯನ್ನು ನೋಡಿರಿ. ಯಾವುದೇ ಲಗ್ನ ಹಾಗೂ ಯಾವುದೇ ರಾಶಿಯಲ್ಲಿ ರವಿ-ಮಂಗಳರ ಸಮಸಪ್ತಕ (ಯಾವುದೇ ಸ್ಥಾನದಲ್ಲಿದ್ದರೂ) ಇದ್ದು ಮೂಲ ಕುಂಡಲಿಯಲ್ಲಿ ಗೋಚರೀಯ ಶನಿಯು ಕ್ರಮವಾಗಿ ರವಿಯ ಮೇಲಿಂದಾಗಲಿ ಮಂಗಳನ ಮೇಲಿಂದಾಗಲೀ ಆಗುವಾಗ ಸಾಡೇಸಾತಿ ಇರದಿದ್ದರೂ (೧೨-೧-೨--೪--೫-೮ನೇ ಶನಿ) ಸಾಡೇಸಾತಿಗಿಂತ ಹೆಚ್ಚು ಹಾನಿದಾಯಕವಾಗುತ್ತದೆ. ಆದರೆ ಇದರ

ಅವಧಿ ಮಾತ್ರ ೨॥ ವರ್ಷಗಳವರೆಗೆ; ಏಕೆಂದರೆ ಗೋಚರಿಯ ಶನಿಯ ಭ್ರಮಣವು ರವಿ ಮಂಗಳರ ಮೇಲಾಗಲಿ ರವಿ-ಮಂಗಳರ ಸಂಗಡ ಸಮಸಪ್ತಕವಾಗುತ್ತಿದ್ದರೂ ಅಶುಭದಾಯಕವು ಇರುತ್ತದೆ.

### ಮಾದರಿ ೪

ನಂ. ೭

| | | | |
|---|---|---|---|
| | | | |
| | | | ರವಿ |
| ಮಂಗ | ತುಲಾಲಗ್ನ | | |
| | | ಲಗ್ನ | |

ನಂ. ೮

| | | | |
|---|---|---|---|
| ರವಿ ಬುಧ | | ಶನಿ ಶುಕ್ರ | |
| ರಾಹು | ಕನ್ಯಾಲಗ್ನ | | |
| ಚಂದ್ರ | | | ಕೇತು |
| ಗುರು | | ಮಂ. | ಲಗ್ನ |

ಮೇಲೆ ತೋರಿಸಿದ ೮ನೆಯ ನಂಬರಿನ ಕುಂಡಲಿಯನ್ನು ನೋಡಿರಿ. ಈ ರಾಶಿಯವರಿಗೆ ಗೋಚರಿಯಿಂದ ೧೦ ನೇ ಶನಿ ಬಂದರೂ ಅಶುಭದಾಯಕನು (ಮಂಗಳನ ಮೇಲಿಂದ ಭ್ರಮಿಸುವ ಕಾರಣ). ಇದರಂತೆ ಗೋಚರಿಯಿಂದ ೩ನೇ ಶನಿ ಬಂದರೂ ಹಾನಿದಾಯಕನು ( ರವಿಯ ಮೇಲಿಂದ ಭ್ರಮಣ ) ಆದರೆ ಅದೇ ೧೨ನೆಯ ಶನಿಯು ಬಂದರೂ ಶುಭದಾಯಕನು ಮೂಲ ಗುರುವಿನ ಮೇಲಿಂದ ಇರುವುದರಿಂದ. ಮಕರ ರಾಶಿಯ ವರಿಗೆ ೧ನೇ, ೨ನೇ ಶನಿಯು ಹಾನಿದಾಯಕವಾಗುವದಿಲ್ಲ. ಇದರಂತೆ ಪಂಚಮ ಶನಿ ಸಹ ಶುಭನಾಗುತ್ತಾನೆ. ಮೂಲ ಶನಿಯ ಮೇಲಿಂದಲೂ ಶುಕ್ರನ ಮೇಲಿಂದಲೂ ಶನಿಯ ಭ್ರಮಣವು ಶುಭದಾಯಕವು.

## ಮಾದರಿ ೫.

ನಂ. ೯

| | | | |
|---|---|---|---|
| | | | |
| | ತುಲಾಲಗ್ನ | | |
| | | | |
| | | ಲಗ್ನ ಶ ಮ | |

ನಂ. ೧೦

| | | | |
|---|---|---|---|
| | ಶ. ಮ. | | |
| | ಕರ್ಕಲಗ್ನ | | ಲಗ್ನ |
| | | | |
| | | | |

ಮೇಲೆ ತೋರಿಸಿದ ೯ನೇ ನಂ. ಕುಂಡಲಿಯನ್ನು ನೋಡಿರಿ. ಈ ಕುಂಡಲಿಗೆ ಶನಿಯು ಯೋಗಕಾರಕನು (ಕೇಂದ್ರ ತ್ರಿಕೋಣಾಧೀಶನು). ಶನಿಯ ಮಹಾದಶೆ ಇರುವಾಗ ಗೋಚರಿಯಿಂದ ಶನಿಯ ಪರಿಭ್ರಮಣ ಮಂಗಳನ ಮೇಲೆ ಆಗುವಾಗ ಕೂಡ ಹಾನಿದಾಯಕವಾಗಲಾರದು (ಶನಿಯ ಮೇಲೆ). ಪರಿಭ್ರಮಣವು ಉಚ್ಚ ರಾಶಿಯಲ್ಲಿಯೂ ಕೇಂದ್ರದಲ್ಲಿಯೂ ಇರುವುದರಿಂದ ಮಂಗಳನ ಮೇಲಿನ ಗೋಚರೀ ಶನಿಯ ಪರಿಭ್ರಮಣ ಹಾನಿದಾಯಕ ಆಗಲಾರದು. ಆದರೆ ಅದೇ ಶನಿಯ ಪರಿಭ್ರಮಣವು ಮಂಗಳನೊಂದಿಗೆ ಸಮಸಪ್ತಕ ಮಾಡುವಾಗ ಹಾನಿದಾಯಕವಾಗುತ್ತದೆ. ಏಕೆಂದರೆ ಶನಿಯ ಪರಿಭ್ರಮಣ ನೀಚ ರಾಶಿಯಲ್ಲಿಯೂ ಅಗ್ನಿ ರಾಶಿಯಲ್ಲಿ ಶತ್ರು ರಾಶಿಯಲ್ಲಿಯೂ ಮೂಲ ಮಂಗಳನೊಂದಿಗೆ ಸಮಸಪ್ತಕವು ಇರುವುದರಿಂದ ಹಾನಿದಾಯಕವಾಗುತ್ತದೆ. ಸಾಡೇಸಾತಿ ಇದ್ದರಂತೂ ಬಹಳೇ ಹಾನಿದಾಯಕವು.

ಮೇಲೆ ತೋರಿಸಿದ ೧೦ನೆಯ ನಂಬರಿನ ಕುಂಡಲಿಯನ್ನು ನೋಡಿರಿ ಈ ಕುಂಡಲಿಗೆ ಮಂಗಳನು ರಾಜಯೋಗಕಾರಕನು(ಕೇಂದ್ರ ತ್ರಿಕೋಣಾಧೀಶ)

ಇಂಥ ಮಂಗಳ ಮಹಾದಶೆ ನಡೆಯುತ್ತಿದ್ದು, ಗೋಚರೀ ಶನಿಯ ಭ್ರಮಣ ಮಂಗಳನ ಮೇಲಿಂದ ಆಗುವಾಗ ಕೂಡ ಹಾನಿದಾಯಕವಾಗಲಾರದು,

**ಮಾದರಿ ೬.**

ನಂ. ೧೧

| | | | |
|---|---|---|---|
| | | | ಮಂ |
| | | | ಲಗ್ನ |
| | ಕರ್ಕಲಗ್ನ | | |
| | ಚಂ. ರ. ಶ. | | |

ನಂ. ೧೨

| | | | |
|---|---|---|---|
| | ಚ.ರಾ | | |
| | ಧನುಲಗ್ನ | | ಮಂ |
| | | | |
| ಲಗ್ನ | | ಕೆ. | |

ಈ ಮೇಲೆ ತೋರಿಸಿದ ೧೧ನಂಬರಿನ ಜಾತಕ (ಕುಂಡಲಿ)ನೋಡಿರಿ. ಈ ಲಗ್ನಕ್ಕೆ ಮಂಗಳನು ಯೋಗಕಾರಕನು. ಜನ್ಮಾರಭ್ಯ ಸಾಡೇಸಾತಿ ಪ್ರಾರಂಭವಾಗಿದೆ. ಮೇಲೆ ರವಿಯು ನೀಚ ರಾಶಿಯವನಿದ್ದು, ರವಿ ಶನಿಯರ ಯೋಗ ಚತುರ್ಥ ಸ್ಥಾನದಲ್ಲಿರುವ ಕಾರಣ ಇಂಥ ಕೂಸುಗಳ ಆರೋಗ್ಯದೃಷ್ಟಿಯಿಂದ ಹಾಗೂ ಮಾತೃಸೌಖ್ಯ ದೃಷ್ಟಿಯಿಂದ ಕೂಡ ಹಾನಿದಾಯಕವು. ಮುಂದೆ ಶನಿಯ ಪರಿಭ್ರಮಣವು ವೃಶ್ಚಿಕಕ್ಕೆ ಆದಾಗ ಜನ್ಮಸ್ಥ ಸಾಡೇಸಾತಿ ಬಲಹೀನ ಲಗ್ನೇಶನ ಮೇಲಿಂದಲೂ ಚಂದ್ರನ ಮೇಲಿಂದಲೂ ಇರುವ ಕಾರಣ ಇಂಥ ಶಿಶುಗಳ ಆರೋಗ್ಯ ದೃಷ್ಟಿಯಿಂದಲೂ ಮಾತೃಸೌಖ್ಯ ದೃಷ್ಟಿಯಿಂದಲೂ ಹಾನಿಕಾರಕವಿರುತ್ತದೆ. ಮುಂದೆ ಶನಿಯ ಪರಿಭ್ರಮಣವು ಧನುರಾಶಿಯ ಮೇಲಿಂದ ಆಗುತ್ತಿದ್ದಾಗ ಅಗ್ನಿರಾಶಿಯ ಶನಿಯು ಪರಿಭ್ರಮಣವೂ ೨ನೇ ಸಾಡೇಸಾತಿಯು ಯೋಗಕಾರಕ ನಿರ್ವೀರ್ಯ ದುರ್ಬಲ ಮಂಗಳನೊಂದಿಗೆ ಷಡಾಷ್ಟಕ ಇರುವ ಕಾರಣ ಶಿಶುವಿನ ಜೀವನಗೆ ದೃಷ್ಟಿಯಿಂದ ಹಾನಿದಾಯಕವು.

ಈ ಹಿಂದೆ ಬರೆದ ೧೨ನೇ ನಂಬರಿನ ಜಾತಕ ನೋಡಿರಿ. ಈ ಲಗ್ನಕ್ಕೆ ಯೋಗಕಾರಕನೂ ಪಂಚಮಾಧೀಶನೂ ಆದ ಮಂಗಳನು ದುರ್ಬಲನಾಗಿ ಅಷ್ಟಮದಲ್ಲಿರುವನು. ಪಂಚಮ ಸ್ಥಾನದಲ್ಲಿ ರಾಹು ಅಗ್ನಿರಾಶಿಯ ಚಂದ್ರನೊಂದಿಗೆ ಇರುವನು. ಇದು ಸಂತತಿ ಸೌಖ್ಯಕ್ಕೆ ಪ್ರತಿಕೂಲವು ಇರುತ್ತದೆ. ಇದೇ ಯೋಗವಿದ್ದು, ಗುರುವಿನ ದೃಷ್ಟಿ ಪಂಚಮ ಸ್ಥಾನದ ಮೇಲಿದ್ದರೆ ಮಾತ್ರ ಅಲ್ಪ ಸಂತತಿ ಸೌಖ್ಯ ಸಿಗುತ್ತದೆ. ಸಾಡೇಸಾತಿಯ ಕಾಲದಲ್ಲಿ ಶನಿಯು ಪರಿಭ್ರಮಣವು, ಪಂಚಮ, ಅಷ್ಟಮ ಸ್ಥಾನಗಳ ಮೇಲಿಂದ ಆಗುವಾಗ ಹುಲಿವುಳಿಕೆಯ ಭೀತಿಯು ಇಲ್ಲವೆ ಶಸ್ತ್ರಕ್ರಿಯಾ ಪ್ರಸಂಗವು ಬರಬಹುದಾಗಿದೆ.

ಓಂ ಶಾಂತಿ :



# ಸಾಡೇಸಾತಿ ಶನಿ ಅನಿಷ್ಟ ಫಲ ಪರಿಹಾರ

ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿಯ ಅಶುಭ ಫಲ ನಿವಾರಣೆಗಾಗಿ ಅರ್ಥಾತ್ ಶನಿಯ ಪ್ರೀತ್ಯರ್ಥವಾಗಿ ಜಪ, ದಾನ, ಪೂಜಾದಿಗಳನ್ನು ಮಾಡಿದಲ್ಲಿ ಅಶುಭ ಫಲದ ಪರಿಣಾಮ ಖಂಡಿತವಾಗಿ ನಿವಾರಣೆಯಾಗುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ:

೧) ಶನಿಯ ಪೀಡಾಪರಿಹಾರಾರ್ಥವಾಗಿ ಪ್ರತಿ ಶನಿವಾರ ಅಭ್ಯಂಗ ಸ್ನಾನ ಮಾಡಿ ಶನಿಯ ಸ್ತೋತ್ರ ಪಠಣಮಾಡಿ ಶನಿ ದೇವರ ಗುಡಿಗೆ ಹೋಗಿ ದರ್ಶನ ಮಾಡಬೇಕು. ದೇವರಿಗೆ ಉಪ್ಪು, ಉದ್ದು, ಎಣ್ಣೆ, ( ಹೆಚ್ಚಾಗಿ ಎಳ್ಳೆಣ್ಣೆ ) ಅರ್ಪಣ ಮಾಡಬೇಕು. ನಿತ್ಯ ಶನಿಯ ಸ್ತೋತ್ರ ಪಠಣ ಮಾಡುವುದು,

೨) ಕನಿಷ್ಟ ಪಕ್ಷ ಪ್ರತಿ ಶನಿವಾರವಾದರೂ ಪಠಣ ಮಾಡಬೇಕು. ಯಾವುದೇ ಹೂವಿನಿಂದ ಪೂಜಿಸಬೇಕು; ನೀಲಿ ಇಲ್ಲವೆ ಕರೀ ಹೂ ಅರ್ಪಿಸುವುದು ಹೆಚ್ಚು ಶ್ರೇಯಸ್ಕರ.

೩) ಪ್ರತಿ ಶನಿವಾರ ಉಪವಾಸ ಮಾಡಬೇಕು, ಇಲ್ಲವೆ ಒಂದೇ ಹೊತ್ತು ಊಟ ಮಾಡಬೇಕು

೪) ವೈಶಾಖ ಅಮಾವಾಸ್ಯೆ ದಿನ ಬರುವ ಶನೀಶ್ವರ ಜಯಂತಿಯನ್ನು ಆಚರಿಸಬೇಕು.

೫) ಶನಿಯ ಕಬ್ಬಿಣದ್ದು, ಸುವರ್ಣದ್ದು ಪ್ರತಿಮೆಯನ್ನು ಪೂಜಿಸಬೇಕು.

೬) ಪುರಾಣ ಮಂತ್ರವಾದ ॥ ನೀಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಂ॥ ಛಾಯಾ ಮಾರ್ತಾಂಡ ಸಂಭೂತಂ ತನ್ನಮಾಮಿ ಶನೈಶ್ಚರಂ॥ ಹೀಗೆ ಪ್ರತಿನಿತ್ಯ ಇಲ್ಲವೇ ಪ್ರತಿ ಶನಿವಾರ ಪಠಣ ಮಾಡಿ ೨೩ಸಾವಿರ ವರೆಗೆ ಜಪಿಸಬೇಕು

೭) ಸುವರ್ಣ, ಕಬ್ಬಿಣ, ನೀಲಮಣಿ, ಉದ್ದು, ಎಮ್ಮೆ, ಎಣ್ಣೆ, ಕಂಬಳಿ, ಕರೀ ಹಾಗೂ ನೀಲಿ ಹೂ ಈ ಪದಾರ್ಥಗಳನ್ನು ದಾನ ಮಾಡಬೇಕು.

ಮೇಲೆಬರೆದ ಏಳು ನಿಯಮಗಳನ್ನು ಪಾಲಿಸಿದಲ್ಲಿ ಖಂಡಿತವಾಗಿ ಶನಿಯ ಅಶುಭ ಫಲ ನಿವಾರಣೆಯಾಗುತ್ತದೆ. ಇದಲ್ಲದೆ ಶನಿಯ ಇನ್ನೊಂದು ಸ್ತೋತ್ರವೆಂದರೆ ॥ಕೋಣಸ್ಥ ಪಿಂಗಲೋಬಭ್ರು ॥ ಇಲ್ಲವೆ ॥ ಜಪಾಕುಸುಮ ಸಂಕಾಶಂ ॥ ಇವನ್ನಾದರೂ ಪ್ರತಿ ಶನಿವಾರ ಜಪಿಸಬೇಕು.

## ॥ ಅಥ ಶನೈಶ್ಚರ ಸ್ತೋತ್ರಮ್ ॥

ಶ್ರೀ ಗಣೇಶಾಯ ನಮಃ ॥ ಅಸ್ಯ ಶ್ರೀ ಶನೈಶ್ಚರ ಸ್ತೋತ್ರಸ್ಯ ದಶರಥ ಋಷಿಃ ಶನೈಶ್ಚರೋ ದೇವತಾ । ತ್ರಿಷ್ಟುಪ್ ಛಂದಃ ಶನೈಶ್ಚರ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥ ದಶರಥ ಉವಾಚ । ಕೋಣೋಽಂತಕೋ ರೌದ್ರ ಯಮೋಽಥ ಬಭ್ರುಃ । ಕೃಷ್ಣಃ ಶನಿಃ ಪಿಂಗಳ ಮಂದಸೌರಿಃ । ನಿತ್ಯಂ ಸ್ಮೃತೋ ಯೋ ಹರತೇಚ ಪೀಡಾಂ ತಸ್ಮೈ ನಮಃ ಶ್ರೀ ರವಿನಂದನಾಯ ॥ ೧ ॥ ಸುರಾಸುರಾಃ ಕಿಂಪುರುಷೋರಗೇಂದ್ರಾ ಗಂಧರ್ವ ವಿದ್ಯಾಧರ ಪನ್ನಗಾಶ್ಚ ಪೀಡ್ಯಂತಿ ಸರ್ವೇ ವಿಷಮಸ್ಥಿತೇನ । ತಸ್ಮೈ ನಮಃ ಶ್ರೀ ರವಿನಂದನಾಯ ॥ ೨ ॥ ನರಾ ನರೇಂದ್ರಾಃ ಪಶವೋ ಮೃಗೇಂದ್ರಾಃ ॥ ವನ್ಯಾಶ್ಚ ಯೇ ಕೀಟ ಪತಂಗ ಭೃಂಗಾಃ ॥ ಪೀಡ್ಯಂತಿ ಸರ್ವೇ ವಿಷಮ ಸ್ಥಿತೇನ ತಸ್ಮೈ ನಮಃ ಶ್ರೀ ರವಿನಂದನಾಯ ॥ ೩ ॥ ದೇಶಾಶ್ಚ ದುರ್ಗಾಣಿ ವನಾನಿ ಯತ್ರ ಸೇನಾನಿವೇಶಾಃ ಪುರಪತ್ತನಾನಿ ಪೀಡ್ಯಂತಿ ಸರ್ವೇ ವಿಷಮ ಸ್ಥಿತೇನ ತಸ್ಮೈ ನಮಃ ಶ್ರೀ ರವಿನಂದನಾಯ ॥ ೪ ॥ ತಿಲೈರ್ಯವೈರ್ಮಾಷ ಗುಡಾನ್ನದಾನೈ ರ್ಲೋಹೇನ ನೀಲಾಂಬರ ದಾನತೋ ವಾ ॥ ಪ್ರೀಣಾತಿ ಮಂತ್ರೈರ್ನಿಜವಾಸರೇ ಚ ತಸ್ಮೈ ನಮಃ ಶ್ರೀ ರವಿನಂದನಾಯ ॥ ೫ ॥ ಪ್ರಯಾಗ ಕೂಲೇ ಯಮುನಾ ತಟೇ ಚ ಸರಸ್ವತಿ ಪುಣ್ಯಜಲೇ ಗುಹಾಯಾಂ । ಯೋ ಯೋಗಿನಾಂ ಧ್ಯಾನಗತೋಽಪಿ ಸೂಕ್ಷ್ಮಃ ತಸ್ಮೈ ನಮಃ ಶ್ರೀ ರವಿನಂದನಾಯ ॥ ೬ ॥ ಅನ್ಯಪ್ರದೇಶಾತ್ಸ್ವಗೃಹಂ ಪ್ರವಿಷ್ಟಸ್ತದೀಯವಾರೇ ಸನರಃ ಸುಖೀಸ್ಯಾತ್ । ಗೃಹಾದ್ಗತೋ ಯೋ ನ ಪುನಃ ಪ್ರಯಾತಿ ತಸ್ಮೈ ನಮಃ ಶ್ರೀ ರವಿನಂದನಾಯ ॥೭॥ ಸ್ರಷ್ಟಾ ಸ್ವಯಂಭೂರ್ಭುವನ ತ್ರಯಸ್ಯ ತ್ರಾತಾ ಹರಿಃ ಸಂಹರತೇ ಪಿನಾಕೀ ॥ ಏಕಸ್ತ್ರಿಧಾ ಋಗ್ಯಜುಃ ಸಾಮ ಮೂರ್ತಿಃ ತಸ್ಮೈ ॥ ೮ ॥ ಶನ್ಯಷ್ಟಕಂ ಯಃ ಪ್ರಯತಃ ಪ್ರಭಾತೇ ನಿತ್ಯಂ ಸುಪುತ್ರೈಃ ಪಶುಬಾಂಧವೈಶ್ಚ ಪಠೇತ್ತು ಸೌಖ್ಯಂ ಭುವಿಭೋಗಯುಕ್ತಃ ಪ್ರಾಪ್ನೋತಿ ನಿರ್ವಾಣ ಪದಂ ತದಂತೇ ॥ ೯ ॥ ಕೋಣಸ್ಥಃ ಪಿಂಗಲೋ ಬಭ್ರುಃ ಕೃಷ್ಣೋ ರೌದ್ರೋಽಂತಕೋ ಯಮಃ ಸೌರಿಃ ಶನೈಶ್ಚರೋ ಮಂದಃ ಪಿಪ್ಪಲಾದೇನ ಸಂಸ್ತುತಃ ॥ ೧೦ ॥ ಏತಾನಿ ದಶ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ಶನೈಶ್ಚರ ಕೃತಪೀಡಾ ನ ಕದಾಚಿದ್ಭವಿಷ್ಯತಿ ॥ ಇತಿ ಶ್ರೀ ದಶರಥ ಪ್ರೋಕ್ತಂ ಶನೈಶ್ಚರ ಸ್ತೋತ್ರಂ ಸಂಪೂರ್ಣಂ ॥ ಇತಿ ಶನೈಶ್ಚರ ಸ್ತೋತ್ರಂ ಸಮಾಪ್ತ

ಇಂಥ ಮಂಗಳ ಮಹಾದಶೆ ನಡೆಯುತ್ತಿದ್ದು, ಗೋಚರೀ ಶನಿಯ ಭ್ರಮಣ ಮಂಗಳನ ಮೇಲಿಂದ ಆಗುವಾಗ ಕೂಡ ಹಾನಿದಾಯಕವಾಗಲಾರದು,

**ಮಾದರಿ ೬.**

ನಂ. ೧೧

| | | | |
|---|---|---|---|
| | | | ಮಂ |
| | ಕರ್ಕಲಗ್ನ | | ಲಗ್ನ |
| | | | |
| | ಚಂ. ರ.ಶ. | | |

ನಂ. ೧೨

| | | | |
|---|---|---|---|
| | ಚ.ರಾ | | |
| | ಧನುಲಗ್ನ | | ಮಂ |
| | | | |
| ಲಗ್ನ | | ಕೆ. | |

ಈ ಮೇಲೆ ತೋರಿಸಿದ ೧೧ನಂಬರಿನ ಜಾತಕ (ಕುಂಡಲಿ)ನೋಡಿರಿ. ಈ ಲಗ್ನಕ್ಕೆ ಮಂಗಳನು ಯೋಗಕಾರಕನು. ಜನ್ಮಾರಭ್ಯ ಸಾಡೇಸಾತಿ ಪ್ರಾರಂಭ ವಾಗಿದೆ. ಮೇಲೆ ರವಿಯು ನೀಚ ರಾಶಿಯುವನಿದ್ದು, ೧೨ ಶನಿಯರ ಯೋಗ ಚತುರ್ಥ ಸ್ಥಾನದಲ್ಲಿರುವ ಕಾರಣ ಇಂಥ ಕೂಸುಗಳ ಆರೋಗ್ಯದೃಷ್ಟಿಯಿಂದ ಹಾಗೂ ಮಾತೃಸೌಖ್ಯ ದೃಷ್ಟಿಯಿಂದ ಕೂಡ ಹಾನಿದಾಯಕವು. ಮುಂದೆ ಶನಿಯ ಪರಿಭ್ರಮಣವು ವೃಶ್ಚಿಕಕ್ಕೆ ಆದಾಗ ಜನ್ಮಸ್ಥ ಸಾಡೇಸಾತಿ ಬಲಹೀನ ಲಗ್ನೇಶನ ಮೇಲಿಂದಲೂ ಚಂದ್ರನ ಮೇಲಿಂದಲೂ ಇರುವ ಕಾ ಣ ಇಂಥ ಶಿಶುಗಳ ಆರೋಗ್ಯ ದೃಷ್ಟಿಯಿಂದಲೂ ಮಾತೃಸೌಖ್ಯ ದೃಷ್ಟಿಯಿಂದಲೂ ಹಾನಿಕಾರಕವಿರುತ್ತದೆ. ಮುಂದೆ ಶನಿಯ ಪರಿಭ್ರಮಣವು ಧನ.ರಾಶಿಯ ಮೇಲಿಂದ ಆಗುತ್ತಿದ್ದಾಗ ಅಗ್ನಿರಾಶಿಯ ಶನಿಯ ಪರಿಭ್ರಮಣವೂ ಶೀ ಸಾಡೇಸಾತಿಯು ಯೋಗಕಾರ ನಿರ್ಬಲ ದ ಬಲ ಮಂಗಳನೊಂದಿಗೆ ಸಮ ಸಪ್ತಕ ಇರುವ ಕಾರಣ ಶಿಶುವಿನ ಜೀವನಗೆ ದೃಷ್ಟಿಯಿಂದ ಹಾನಿದಾಯಕವು.

ಈ ಹಿಂದೆ ಬರೆದ ೧೨ನೇ ನಂಬರಿನ ಜಾತಕ ನೋಡಿರಿ. ಈ ಲಗ್ನಕ್ಕೆ ಯೋಗಕಾರಕನೂ ಪಂಚಮಾಧೀಶನೂ ಆದ ಮಂಗಳನು ದುರ್ಬಲನಾಗಿ ಅಷ್ಟಮದಲ್ಲಿರುವನು. ಪಂಚಮ ಸ್ಥಾನದಲ್ಲಿ ರಾಹು ಅಗ್ನಿರಾಶಿಯ ಚಂದ್ರನೊಂದಿಗೆ ಇರುವನು. ಇದು ಸಂತತಿ ಸೌಖ್ಯಕ್ಕೆ ಪ್ರತಿಕೂಲವು ಇರುತ್ತದೆ. ಇದೇ ಯೋಗವಿದ್ದು, ಗುರುವಿನ ದೃಷ್ಟಿ ಪಂಚಮ ಸ್ಥಾನದ ಮೇಲಿದ್ದರೆ ಮಾತ್ರ ಅಲ್ಪ ಸಂತತಿ ಸೌಖ್ಯ ಸಿಗುತ್ತದೆ. ಸಾಡೇಸಾತಿಯ ಕಾಲದಲ್ಲಿ ಶನಿಯು ಪರಿಭ್ರಮಣವು, ಪಂಚಮ, ಅಷ್ಟಮ ಸ್ಥಾನಗಳ ಮೇಲಿಂದ ಆಗುವಾಗ ಹುಲಿಪುಳಿವಿಕೆಯ ಭೀತಿಯು ಇಲ್ಲವೆ ಶಸ್ತ್ರಕ್ರಿಯಾ ಪ್ರಸಂಗವು ಬರಬಹುದಾಗಿದೆ.

ಓಂ ಶಾಂತಿ :



# ಸಾಡೇಸಾತಿ ಶನಿ ಅನಿಷ್ಟ ಫಲ ಪರಿಹಾರ

ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿಯ ಅಶುಭ ಫಲ ನಿವಾರಣೆಗಾಗಿ ಅರ್ಥಾತ್ ಶನಿಯ ಪ್ರೀತ್ಯರ್ಥವಾಗಿ ಜಪ, ದಾನ, ಪೂಜಾದಿಗಳನ್ನು ಮಾಡಿದಲ್ಲಿ ಅಶುಭ ಫಲದ ಪರಿಣಾಮ ಖಂಡಿತವಾಗಿ ನಿವಾರಣೆಯಾಗುತ್ತದೆ. ಅವುಗಳನ್ನು ಈ ರೀತಿನಂತೆ ವಿವರಿಸಲಾಗಿದೆ:

೧) ಶನಿಯ ಪೀಡಾಪರಿಹಾರಾರ್ಥವಾಗಿ ಪ್ರತಿ ಶನಿವಾರ ಅಭ್ಯಂಗ ಸ್ನಾನ ಮಾಡಿ ಶನಿಯ ಸ್ತೋತ್ರ ಪಠಣಮಾಡಿ ಶನಿ ದೇವರ ಗುಡಿಗೆ ಹೋಗಿ ದರ್ಶನ ಮಾಡಬೇಕು. ದೇವರಿಗೆ ಉಪ್ಪು, ಉದ್ದು, ಎಣ್ಣೆ, ( ಹೆಚ್ಚಾಗಿ ಎಳ್ಳೆಣ್ಣೆ ) ಅರ್ಪಣ ಮಾಡಬೇಕು. ನಿತ್ಯ ಶನಿಯ ಸ್ತೋತ್ರ ಪಠಣ ಮಾಡುವುದು,

೨) ಕನಿಷ್ಠ ಪಕ್ಷ ಪ್ರತಿ ಶನಿವಾರವಾದರೂ ಪಠಣ ಮಾಡಬೇಕು. ಯಾವುದೇ ಹೂವಿನಿಂದ ಪೂಜಿಸಬೇಕು; ನೀಲಿ ಇಲ್ಲವೆ ಕರೀ ಹೂ ಅರ್ಪಿಸುವುದು ಹೆಚ್ಚು ಶ್ರೇಯಸ್ಕರ.

೩) ಪ್ರತಿ ಶನಿವಾರ ಉಪೋಷಣ ಮಾಡಬೇಕು, ಇಲ್ಲವೆ ಒಂದೇ ಹೊತ್ತು ಊಟ ಮಾಡಬೇಕು

೪) ವೈಶಾಖ ಅಮಾವಾಸ್ಯೆ ದಿನ ಬರುವ ಶನೀಶ್ವರ ಜಯಂತಿಯನ್ನು ಆಚರಿಸಬೇಕು.

೫) ಶನಿಯ ಕಬ್ಬಿಣದ್ದು, ಸುವರ್ಣದ್ದು ಪ್ರತಿಮೆಯನ್ನು ಪೂಜಿಸಬೇಕು.

೬) ಪುರಾಣ ಮಂತ್ರವಾದ ॥ ನೀಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಂ॥ ಛಾಯಾ ಮಾರ್ತಾಂಡ ಸಂಭೂತಂ ತನ್ನಮಾಮಿ ಶನೈಶ್ಚರಂ॥ ಹೀಗೆ ಪ್ರತಿನಿತ್ಯ ಇಲ್ಲವೇ ಪ್ರತಿ ಶನಿವಾರ ಪಠಣ ಮಾಡಿ ೨೩ಸಾವಿರ ವರೆಗೆ ಜಪಿಸಬೇಕು

೭) ಸುವರ್ಣ, ಕಬ್ಬಿಣ, ನೀಲಮಣಿ, ಉದ್ದು, ಎಮ್ಮೆ, ಎಣ್ಣೆ, ಕಂಬಳಿ, ಕರೀ ಹಾಗೂ ನೀಲಿ ಹೂ ಈ ಪದಾರ್ಥಗಳನ್ನು ದಾನ ಮಾಡಬೇಕು.

ಮೇಲೆಬರೆದ ಏಳು ನಿಯಮಗಳನ್ನು ಪಾಲಿಸಿದಲ್ಲಿ ಖಂಡಿತವಾಗಿ ಶನಿಯ ಅಶುಭ ಫಲ ನಿವಾರಣೆಯಾಗುತ್ತದೆ. ಇದಲ್ಲದೆ ಶನಿಯ ಇನ್ನೊಂದು ಸ್ತೋತ್ರವೆಂದರೆ ॥ಕೋಣಸ್ಥ ಪಿಂಗಲೋಬಭ್ರು ॥ ಇಲ್ಲವೆ ॥ ಜಪಾಕುಸುಮ ಸಂಕಾಶಂ ॥ ಇವನ್ನಾದರೂ ಪ್ರತಿ ಶನಿವಾರ ಜಪಿಸಬೇಕು.

## ॥ ಅಥ ಶನೈಶ್ಚರ ಸ್ತೋತ್ರಮ್ ॥

ಶ್ರೀ ಗಣೇಶಾಯ ನಮಃ ॥ ಅಸ್ಯ ಶ್ರೀ ಶನೈಶ್ಚರ ಸ್ತೋತ್ರಸ್ಯ ದಶರಥ ಋಷಿಃ ಶನೈಶ್ಚರೋ ದೇವತಾ । ತ್ರಿಷ್ಟುಪ್ ಛಂದಃ ಶನೈಶ್ಚರ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥ ದಶರಥ ಉವಾಚ । ಕೋಣೋಂತಕೋ ರೌದ್ರ ಯಮೋಥ ಬಭ್ರುಃ । ಕೃಷ್ಣಃ ಶನಿಃ ಪಿಂಗಳ ಮಂದಸೌರಿಃ । ನಿತ್ಯಂ ಸ್ಮೃತೋ ಯೋ ಹರತೇ ಚ ಪೀಡಾಂ ತಸ್ಮೈ ನಮಃ ಶ್ರೀ ರವಿನಂದನಾಯ ॥ ೧ ॥ ಸುರಾಸುರಾಃ ಕಿಂಪುರುಷೋರಗೇಂದ್ರಾ ಗಂಧರ್ವ ವಿದ್ಯಾಧರ ಪನ್ನಗಾಶ್ಚ ಪೀಡ್ಯಂತಿ ಸರ್ವೇ ವಿಷಮಸ್ಥಿತೇನ । ತಸ್ಮೈ ನಮಃ ಶ್ರೀ ರವಿನಂದನಾಯ ॥ ೨ ॥ ನರಾ ನರೇಂದ್ರಾಃ ಪಶವೋ ಮೃಗೇಂದ್ರಾಃ ॥ ವನ್ಯಾಶ್ಚ ಯೇ ಕೀಟ ಪತಂಗ ಭೃಂಗಾಃ ॥ ಪೀಡ್ಯಂತಿ ಸರ್ವೇ ವಿಷಮ ಸ್ಥಿತೇನ ತಸ್ಮೈ ನಮಃ ಶ್ರೀ ರವಿನಂದನಾಯ ॥ ೩ ॥ ದೇಶಾಶ್ಚ ದುರ್ಗಾಣಿ ವನಾನಿ ಯತ್ರ ಸೇನಾನಿವೇಶಾಃ ಪುರಪತ್ತನಾನಿ ಪೀಡ್ಯಂತಿ ಸರ್ವೇ ವಿಷಮ ಸ್ಥಿತೇನ ತಸ್ಮೈ ನಮಃ ಶ್ರೀ ರವಿನಂದನಾಯ ॥ ೪ ॥ ತಿಲೈರ್ಯವೈರ್ಮಾಷ ಗುಡಾನ್ನದಾನೈ ರ್ಲೋಹೇನ ನೀಲಾಂಬರ ದಾನತೋ ವಾ ॥ ಪ್ರೀಣಾತಿ ಮಂತ್ರೈರ್ನಿಜ ವಾಸರೇ ಚ ತಸ್ಮೈ ನಮಃ ಶ್ರೀ ರವಿನಂದನಾಯ ॥ ೫ ॥ ಪ್ರಯಾಗ ಕೂಲೇ ಯಮುನಾ ತಟೇ ಚ ಸರಸ್ವತಿ ಪುಣ್ಯ ಜಲೇ ಗುಹಾಯಾಂ । ಯೋ ಯೋಗಿನಾಂ ಧ್ಯಾನಗತೋಪಿ ಸೂಕ್ಷ್ಮಸ್ತಸ್ಮೈ ನಮಃ ಶ್ರೀ ರವಿನಂದನಾಯ ॥ ೬ ॥ ಅನ್ಯ ಪ್ರದೇಶಾತ್ಸ್ವಗೃಹಂ ಪ್ರವಿಷ್ಟಸ್ತದೀಯವಾರೇ ಸನರಃ ಸುಖೀ ಸ್ಯಾತ್ । ಗೃಹಾದ್ಗತೋ ಯೋ ನ ಪುನಃ ಪ್ರಯಾತಿ ತಸ್ಮೈ ನಮಃ ಶ್ರೀ ರವಿನಂದನಾಯ ॥ ೭ ॥ ಸ್ರಷ್ಟಾ ಸ್ವಯಂಭೂರ್ಭುವನ ತ್ರಯಸ್ಯ ತ್ರಾತಾ ಹರಿಃ ಸಹರ ತೇ ಪಿನಾಕಿ ॥ ಏಕಸ್ತ್ರಿಧಾ ಋಗ್ಯಜುಃ ಸಾಮ ಮೂರ್ತಿ ಸ್ತಸ್ಮೈ ॥ ೮ ॥ ಶನ್ಯಷ್ಟಕಂ ಯಃ ಪ್ರಯತಃ ಪ್ರಭಾತೇ ನಿತ್ಯಂ ಸುಪುತ್ರೈಃ ಪಶುಬಾಂಧವೈಶ್ಚ ಪಠೇತ್ತು ಸೌಖ್ಯಂ ಭುವಿ ಭೋಗಯುಕ್ತಃ ಪ್ರಾಪ್ನೋತಿ ನಿರ್ವಾಣ ಪದಂ ತದಂತೇ ॥ ೯ ॥ ಕೋಣಸ್ಥ ಪಿಂಗಳೋ ಬಭ್ರುಃ ಕೃಷ್ಣೋ ರೌದ್ರೋಂತಕೋ ಯಮಃ ಸೌರಿಃ ಶನೈಶ್ಚರೋ ಮಂದಃ ಪಿಪ್ಪಲಾದೇನ ಸಂಸ್ತುತಃ ॥ ೧೦ ॥ ಏತಾನಿ ದಶ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ಶನೈಶ್ಚರ ಕೃತಾ ಪೀಡಾ ನ ಕದಾಚಿದ್ಭವಿಷ್ಯತಿ ॥ ಇತಿ ಶ್ರೀ ದಶರಥ ಪ್ರೋಕ್ತಂ ಶನೈಶ್ಚರ ಸ್ತೋತ್ರಂ ಸಂಪೂರ್ಣಂ ॥ ಇತಿ ಶನೈಶ್ಚರ ಸ್ತೋತ್ರಂ ಸಮಾಪ್ತ

# ಎನ್. ಕೆ. ಜೋಗಳೇಕರ ಕೃತ ಜ್ಯೋತಿಷ್ಯ ಗ್ರಂಥಗಳು

## ೧. ವಧೂವರರ ಜ್ಯೋತಿಷ್ಯ

ಬೆಲೆ : ರೂ ೧೦—೦೦ (ಪಂಚಮಾವೃತ್ತಿ)

ಈ ಗ್ರಂಥದಲ್ಲಿ ವಧೂ-ವರರ ಜನ್ಮ ಟಿಪ್ಪಣ (ಕುಂಡಲಿ) ಗಳನ್ನು ಏಕೆ ಹಾಗೂ ಹೇಗೆ ನೋಡಬೇಕು ? ನಾಡಿ, ಯೋನಿ, ಗಣ, ಕೂಟಗಳೆಂದರೇನು ? ಇವನ್ನು ಏಕೆ ಹೇಗೆ ನೋಡಬೇಕು ? ಮಂಗಳ ( ಕುಜ ) ದೋಷ ವೆಂದರೇನು ? ಕುಜ (ಮಂಗಳ) ದೋಷವನ್ನು ಏಕೆ ಹಾಗೂ ಹೇಗೆ ನೋಡಬೇಕು ? ಅಪವಾದ ಕುಜ ದೋಷವೆಂದರೇನು ? ಇದಲ್ಲದೆ ವಧೂ-ವರರ ವಿವಾಹ ಕಾಲ ಯಾವುದು ? ಅದು ಯಾವ ವಯಸ್ಸಿನಲ್ಲಿ, ಯಾವ ವರುಷ, ಯಾವ ತಿಂಗಳು ಎಂಬುದನ್ನು ಹೇಗೆ ಕಂಡುಹಿಡಿಯಬೇಕು ? ಇವೇ ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೨. ಆಕಸ್ಮಿಕ ಧನಯೋಗ

ಬೆಲೆ : ರೂ. ೬—೦೦ ( ಚತುರ್ಥ ಮುದ್ರಣ )

ಈ ಗ್ರಂಥದಲ್ಲಿ ಆಕಸ್ಮಿಕ ಧನಯೋಗ ಅಂದರೇನು ? ಅದನ್ನು ಹೇಗೆ ಪರಿಶೀಲಿಸಬೇಕು ? ಇದಲ್ಲದೆ ಸಟ್ಟಾ, ಲಾಟರಿ, ರೇಸು ಭೂಗತ, ಪ್ರಾಯಿಜ ಬಾಂಡ, ಸ್ತ್ರೀಧನ ( ಸ್ವಸ್ತ್ರೀ ಹಾಗೂ ಪರಸ್ತ್ರೀ ), ವಾರಸಾ, ದತ್ತಕ, ಕಾಣಿಕೆ, ಲಂಚ, ಕಾಲಾ ಬಜಾರ ಇವುಗಳಿಂದ ಆಕಸ್ಮಿಕ ಧನಲಾಭ ವನ್ನು ಹೇಗೆ ಗುರುತಿಸಬೇಕೆಂಬುದನ್ನು ಮಾದರೀ ಕುಂಡಲಿಗಳಿಂದ ವಿವರಿಸ ಲಾಗಿದೆ.

## ೩. ಸ್ತ್ರೀ ಜ್ಯೋತಿಷ್ಯ

ಬೆಲೆ : ರೂ. ೧೦—೦೦ ( ತೃತೀಯಾವೃತ್ತಿ )

ಸ್ತ್ರೀಯರ ಜೀವನದ ಅನೇಕ ಮುಖಗಳನ್ನು ಅಭ್ಯಸಿಸಿ ಬರೆದ ವಿಸ್ತಾರ ವಾದ ಗ್ರಂಥ. ಇದರಲ್ಲಿ ಸ್ತ್ರೀಯರ ಸ್ವಭಾವ, ಸೌಂದರ್ಯ, ವಿವಾಹ ಕಾಲ, ಪ್ರೇಮವಿವಾಹ, ಪುನರ್ವಿವಾಹ, ಅಂತರ್ಜಾತೀಯ ವಿವಾಹ, ಆಜನ್ಮ ಕುಮಾರಿಯೋಗ, ಘಟಸ್ಫೋಟ, ವೈಧವ್ಯಯೋಗ, ಗರ್ಭಧಾರಣ, ಸಂತತಿ ಸುಖ, ಹಾಗೂ ಗರ್ಭಪತನ ಯೋಗಗಳು, ಗರ್ಭ ಪ್ರತಿಬಂಧ,

ವನ್ನು ಯಾರು ಮಾಡಿಸಿಕೊಳ್ಳಬೇಕು, ವಂಧ್ಯಾಯೋಗ, ಭಾಗ್ಯ, ಮನೋವಾಸನೆ,, ಆರ್ಥಿಕ ಸ್ವಾತಂತ್ರ್ಯ, ಸ್ವಾವಲಂಬನ, ರಾಜಕಾರಣಪಟುತ್ವ, ಸಮಾಜ ಧುರೀಣತ್ವ ಮುಂತಾದ ವಿಷಯಗಳನ್ನು ಆಧುನಿಕ ಸಮಾಜಕ್ಕನುಸರಿಸಿ, ಫಲ ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲಿಂದ ಹೇಗೆ ನೋಡಬೇಕೆಂಬುದನ್ನು ವಿವೇಚಿಸಿದೆ.

## ೪. ಅಜ್ಞಾತ ಜಾತಕ ದರ್ಶನ

ಬೆಲೆ : ರೂ. ೫–೧೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ಜನ್ಮವೇಳೆ-ಜನ್ಮಮಿತಿ ಸರಿಯಾಗಿ ಗೊತ್ತಿಲ್ಲದ ವ್ಯಕ್ತಿಯ ಜಾತಕವನ್ನು ಅವನ ನೇತ್ರ-ಕರ್ಣಾವಲೋಕನ, ಗದ್ದ-ಗಲ್ಲಗಳ ಪರೀಕ್ಷೆ ಮೊದಲಾದ ಮುಖ ಲಕ್ಷಣಗಳ ಮೇಲಿಂದಲೂ ನಡೆ-ನುಡಿ, ನಿದ್ರಾ, ಭಂಗಿ, ಅಭಿರುಚಿ, ವಾಕ್‌ಚಾತುರ್ಯ ಮುಂತಾದ ಲಕ್ಷಣಗಳಿಂದಲೂ ಕಂಡು ಹಿಡಿಯಬಹುದು. ಅದರಂತೆ ವ್ಯಕ್ತಿಯ ಜೀವನದಲ್ಲಿಯ ನಡೆದು ಹೋದ ಘಟನೆಗಳ ಮೇಲಿಂದ ಜಾತಕವನ್ನು ಒರೆಗೆಹಚ್ಚಿ ನೋಡಬಹುದು. ಈ ಮೊದಲಾದ ಸಂಗತಿಗಳಿಂದ ಯೋಗ್ಯ ಜನ್ಮ ಪತ್ರಿಕೆ ಇಲ್ಲದವನ ಭವಿಷ್ಯ ಹೇಗೆ ಹೇಳಬೇಕೆಂಬುದನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

## ೫. ಸಾಡೇಸಾತಿ

ಬೆಲೆ : ರೂ. ೧೧–೦೦ ( ಚತುರ್ಥಾವೃತ್ತಿ )

ಈ ಗ್ರಂಥದಲ್ಲಿ ಸಾಡೇಸಾತಿ ಅಂದರೇನು ? ಸಾಡೇಸಾತಿಯನ್ನು ಹೇಗೆ ಪರಿಶೀಲಿಸಬೇಕು ? ಅನುಕೂಲ-ಪ್ರತಿಕೂಲ ಸಾಡೇಸಾತಿ ಅಂದರೇನು ? ರಾಶಿ, ಸ್ಥಾನ, ಗ್ರಹಗಳು, ಭಾವೇಶ ಇವುಗಳ ಮೇಲಿಂದ ಶನಿಯು ಭ್ರಮಿಸುವಾಗ ಆಗುವ ಪರಿಣಾಮ, ದಶಾ-ಅಂತರ್ದಶೆಯಲ್ಲಿ ಸಾಡೇಸಾತಿಯ ಪರಿಣಾಮ, ಅಷ್ಟಕವರ್ಗ ಪದ್ಧತಿಯಿಂದ ಸಾಡೇಸಾತಿಯ ವಿಚಾರ ಇವೇ ಮೊದಲಾದ ಸಾಡೇಸಾತಿಯ ವಿಷಯವಾಗಿ – ಮಾದರಿ ಕುಂಡಲಿಗಳೊಂದಿಗೆ ವಿವೇಚಿಸಲಾಗಿದೆ.

# ೬. ಉದ್ಯೋಗ ಜ್ಯೋತಿಷ್ಯ — ಭಾಗ ೧
## ( ನೌಕರಿ ಮಾರ್ಗದರ್ಶಿ )

ಬೆಲೆ : ೨೦–೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ನೌಕರಿಗಳಲ್ಲಿಯ ಪ್ರಕಾರಗಳು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳನ್ನು ಕುರಿತು ಸುದೀರ್ಘವಾಗಿ ವಿವೇಚಿಸಲಾಗಿದ್ದು, ಜ್ಯೋತಿಷ್ಯ ಶಾಸ್ತ್ರದಲ್ಲಿಯೇ ಇದೊಂದು ನೂತನ ಸಂಶೋಧನಾ ಗ್ರಂಥವು.

ಜೀವನ ರಂಗ ಪ್ರವೇಶಿಸುವ ನೌಕರಿ ಉದ್ಯೋಗಾರ್ಥಿಗಳಿಗೆ ಸಹಾಯವಾಗುವ, ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲೆ ರಚಿತವಾದಂತಹ ಸರಿಯಾದ ಗ್ರಂಥವು ಯಾವುದೊಂದೂ ಈ ವರೆಗೆ ಇರಲಿಲ್ಲ. ಈಗ ಈ 'ಉದ್ಯೋಗ ಜ್ಯೋತಿಷ್ಯ' ವು ಅಂತಹ ನೌಕರಿ ಉದ್ಯೋಗಾರ್ಥಿಗಳಿಗೊಂದು ಕೈದೀವಿಗೆಯಾಗಿದೆ.

ಕಾರಕೂನರು, ಟೈಪಿಸ್ಟರು, ಶೀಘ್ರಲಿಪಿಗಾರರು, ಜವಾನರು, ಇನ್ಸ್ಪೆಕ್ಟರರು, ಸ್ಟೋರ್‌ಕೀಪರರು, ವೈಜ್ಞಾನಿಕ ವಿಭಾಗದ ನೌಕರರು, ಅಗ್ನಿಶಾಮಕ ದಳದ ಸಿಬ್ಬಂದಿ, ಅರ್ಥಶಾಸ್ತ್ರಜ್ಞರು, ಅಂಕಿಸಂಖ್ಯಾ ತಜ್ಞರು, ಎಂಜನಿಯರುಗಳಲ್ಲಿಯ ಪ್ರಕಾರ ಹಾಗೂ ತಾಂತ್ರಿಕ ಸಿಬ್ಬಂದಿ ಎಂದು ಮುಂತಾಗಿ ವಿವಿಧ ಖಾತೆಗಳಲ್ಲಿ ಇರುವ ಸಾಮಾನ್ಯ ಹುದ್ದೆಗಳೂ ಹಾಗೂ ಸಿವ್ಹಿಲ್ ಸರ್ವಿಸ್, ಮಿಲಿಟರಿ ಸರ್ವಿಸ್, ಆಕಾಶವಾಣಿ, ರೇಲ್ವೆ, ಅಂಚೆ, ಮತ್ತು ತಂತಿ, ಸುಂಕ, ಕೇಂದ್ರ ಅಬಕಾರಿ, ವರಮಾನ ತೆರಿಗೆ, ವಾಯುಯಾನೋದ್ಯಾಣ, ವಿಮಾನದಳ, ಸೈನ್ಯ, ಟಂಕಸಾಲೆ, ಆಡಿಟ ಹಾಗೂ ಅಕೌಂಟ, ಗಣಿ ಹಾಗೂ ಭೂಗರ್ಭ, ಸಚಿವಾಲಯ, ರೆವಿನ್ಯೂ, ಒಕ್ಕಲುತನ, ಸಾರ್ವಜನಿಕ ಶಿಕ್ಷಣ, ವೈದ್ಯಕ ಹಾಗೂ ಆರೋಗ್ಯ, ನ್ಯಾಯ, ಪೋಲೀಸ, ಸ್ಟೇಟ್ ಅಕೌಂಟ್ಸ, ಅರಣ್ಯ, ಪಶುಸಂಗೋಪನ ಹಾಗೂ ಪಶುಸಂಪತ್ತು, ತೋಟಗಾರಿಕೆ, ಕಮರ್ಸಿಯಲ್ ಟ್ಯಾಕ್ಸ್, ಸಹಕಾರ ಹಾಗೂ ಮಾರ್ಕೆಟಿಂಗ, ಕೂಲಿಕಾರ, ಸಮಾಜ ವಿಕಾಸ ಹಾಗೂ ಕಲ್ಯಾಣ, ಮೀನುಗಾರಿಕೆ, ಚಾರಿಟಿ ಕಮೀಶನರ, ಪಾನನಿರೋಧ, ಹಾಗೂ ಲಂಚ ನಿರ್ಮೂಲನ, ಜೇಲು, ರೀಜನಲ್ ಟ್ರಾನ್ಸಪೋರ್ಟ, ರಾಷ್ಟ್ರೀಯ ಉದ್ಯೋಗಿಕ, ಬಂದರಗಾಹ,

ಆಹಾರ ಪೂರೈಕೆ ಹಾಗೂ ಉತ್ಪಾದನೆ, ಪ್ರಾಚ್ಯವಸ್ತು ಸಂಶೋಧನೆ, ಬ್ಯಾಂಕ್ಸ್, ಜೀವವಿಮಾ, ಸ್ಟೇಟ್ ಟ್ರಾನ್ಸಪೋರ್ಟ, ವಿಶ್ವವಿದ್ಯಾಲಯ, ಖಾದಿ-ಗ್ರಾಮೋದ್ಯೋಗ, ಪತ್ರಿಕೋದ್ಯಮ ಹಾಗೂ ಕಾರಖಾನೆ, ಗಿರಣಿಗಳು ಮೊದಲಾದ ಭಿನ್ನ ಭಿನ್ನ ಖಾತೆಗಳು, ಅಲ್ಲಿ ಹುದ್ದೆಗಳನ್ನು ಪಡೆಯುವವನ ಜಾತಕ ಎಂತಿರಬೇಕು ?

ಇದಲ್ಲದೆ ಈ ಗ್ರಂಥದಲ್ಲಿ ನೌಕರಿಗೆ ಸಂಬಂಧಿಸಿದಂತೆ,ನೌಕರಿ ಹತ್ತುವ ಕಾಲ, ಬದಲಿ, ಬಡತಿ, ರಜೆ, ಖಾಯಂ ಆಗುವದು, ಎಕ್ಸಟೆನ್ಶನ್,ಮೇಲಿನ ಅಧಿಕಾರಿಗಳ ಕೃಪಾವಕೃಪೆ ಇವುಗಳನ್ನು ಕುರಿತು ಸಹ ವಿವೇಚಿಸಲಾಗಿದೆ.

## ೭. ಉದ್ಯೋಗ ಜ್ಯೋತಿಷ್ಯ ಭಾಗ— ೨

( ವೃತ್ತಿ ಮಾರ್ಗದರ್ಶಿ )

ಬೆಲೆ : ರೂ. ೨೫—೦೦

ಈ ಗ್ರಂಥದಲ್ಲಿ ಸ್ವತಂತ್ರ ಉದ್ಯೋಗಸ್ಥರ ವೃತ್ತಿಗಳನ್ನು ೧೨ ಅಧ್ಯಾಯಗಳಲ್ಲಿ ವಿವೇಚಿಸಲಾಗಿದೆ. ಮೊಟ್ಟ ಮೊದಲು ಯಾವದೇ ಸ್ವತಂತ್ರ ಉದ್ಯೋಗಸ್ಥರ ಜಾತಕ ಹೇಗೆ ಇರುತ್ತದೆ ಎಂಬುದನ್ನು ವಿವರಿಸಲಾಗಿದೆ, ಆ ಬಳಿಕ ಕೃಷಿ ವೃತ್ತಿ, ಕೃಷಿ ಆಧಾರಿತ ವೃತ್ತಿಗಳಾದ ಕೋಳಿ ಸಾಕಾಣಿಕೆ, ಹೈನುಗಾರಿಕೆ, ರೇಶ್ಮೆಯ ವ್ಯವಸಾಯ, ಜೇನು ಸಾಕಾಣಿಕೆ, ಮತ್ಸ್ಯೋದ್ಯಮ ಮೊದಲಾದವುಗಳ ವಿವರಣೆಯಿದೆ. ಆ ಬಳಿಕ ಹಲವು ವಿಧದ ಸಾರಿಗೆ ವೃತ್ತಿ, ಉದ್ಯಮ ವೃತ್ತಿ, ನಾನಾ ಬಗೆಯ ವ್ಯಾಪಾರಸ್ಥರ ವೃತ್ತಿ, ಎಲ್ಲ ಪ್ರಕಾರದ ಯಂತ್ರಗಳ ( ರಿಪೇರರ್ಸ ) ದುರಸ್ತಿಗಾರರ ವೃತ್ತಿ, ಫಾರ್ಮಸಿಸ್ಟ ಅಟಕಾರಿ, ಕಟ್ಟಡ ಮೊದಲಾದ, ವಿಮೆ-ನ್ಯೂಜಪೇಪರ ಮೊದಲಾದ ಎಲ್ಲ ಪ್ರಕಾರದ ಕಾಂಟ್ರಾಕ್ಟರರ ಏಜನ್ಸಿಯವರ ವಿಭಿನ್ನ ವೃತ್ತಿ ಹೇಗೆ ಇರುತ್ತವೆ ಎಂಬುದರ ಸವಿಸ್ತಾರ ವಿವರಣೆಯಿದೆ. ಬುದ್ಧಿಜೀವಿಗಳಾದ ಎಲ್ಲ ಪ್ರಕಾರದ ಡಾಕ್ಟರರು, ಅಲೋಪತಿ, ಹೋಮಿಯೋಪತಿ, ಆಯುರ್ವೇದ, ಯುನಾನಿ, ನಿಸರ್ಗಚಿಕಿತ್ಸಾ ತಜ್ಞರು, ವನ ಮೂಲಿಕಾ ಪ್ರಯೋಗದ ವೈದ್ಯರು, ಚುಂಬಕ ಚಿಕಿತ್ಸಾ ತಜ್ಞರು, ಸೂಜಿ ಚಿಕಿತ್ಸಕರು, ದಂತವೈದ್ಯರು, ನೇತ್ರ ತಜ್ಞರು, ಮಾನಸಿಕ ರೋಗ ತಜ್ಞರು, ಶಸ್ತ್ರ ಚಿಕಿತ್ಸಾ ತಜ್ಞರು, ಸಲಹೆ

ಗಾರಿಕೆಯ ವೈದ್ಯರು,ಪೆಥಾಲಾಜಿಸ್ಟರು, ಕಿವಿ-ಮೂಗು-ಗಂಟಲು ತಜ್ಞರು, ಪ್ರಸೂತಿ ತಜ್ಞರು, ಚರ್ಮ ರೋಗ ತಜ್ಞರು, ಚಿಕ್ಕ ಮಕ್ಕಳ ರೋಗ ತಜ್ಞರು, ಫೀಜಿಯೊ-ಥೆರೆಪಿಸ್ಟರು, ದಾದಿಯರು, ಸೂಲಗಿತ್ತಿಯರು, ವಿವಿಧ ತಂತ್ರಜ್ಞರು, ಔಷಧಿ ವ್ಯಾಪಾರಸ್ಥರು, ವಾಸ್ತು ಶಿಲ್ಪಿಗಳು(ಆರ್ಕಿಟೆಕ್ಟರು) ಚಾರ್ಟರ್ಡ್ ಅಕೌಂಟಂಟರು, ಕಾಸ್ಟ ಅಕೌಂಟಂಟರು, ತೆರಿಗೆ ಸಲಹೆಗಾರರು, ಟ್ಯುಟೋರಿಯಲ್ ಕ್ಲಾಸುಗಳು ಹಾಗೂ ವಿಶಿಷ್ಟ ಪರೀಕ್ಷಾ ವಿಷಯಗಳ ತರಬೇತಿ ತಜ್ಞರು,ದಸ್ತು ಬರೆಹಗಾರರು(ಬಾಂಡರಾಯಿಟರ್ಸ್), ಲೇಖಕರು, ಗ್ರಂಥಕರ್ತರು, ಸಂಪಾದಕರು, ಕವಿಗಳು ಕಾದಂಬರಿಕಾರರು ನಾಟಕಕಾರರು, ಸಂವಹನಮಾಧ್ಯಮ ಸಾಹಿತ್ಯ ಲೇಖಕರು, ವೈಚಾರಿಕ ಸಾಹಿತ್ಯದ ಲೇಖಕರು. ಶಾಸ್ತ್ರೀಯ ಸಾಹಿತ್ಯದ ಲೇಖಕರು,ಪತ್ರಕರ್ತರು, ಸೈದ್ಧಾಂತಿಕ ಸಾಹಿತ್ಯದ ಲೇಖಕರು, ಫಲಜ್ಯೋತಿಷ್ಯರುಗಳು, ಪುರೋಹಿತರು, ಮಾಂತ್ರಿಕರು, ಪಂಚಾಂಗಕರ್ತರು—ಇವರೇ ಮೊದಲಾದ ಬುದ್ಧಿಜೀವಿ ವೃತ್ತಿಯವರು. ಅಲ್ಲದೆ ಎಲ್ಲ ಪ್ರಕಾರದ ಕಲಾಕಾರರು, ಹಾಗೂ ಕುಶಲಕರ್ಮಿಗಳಾದ ಚಿತ್ರ ಕಲಾಕಾರರು, ಹಾಗೂ ಬಣ್ಣದ ( ವರ್ಣ ) ಕಲಾಕಾರರು, ಫೋಟೋಗ್ರಾಫರರು, ನೃತ್ಯಕಾರರು, ಸಂಗೀತಕಾರರು ವಾದ್ಯಕಾರರು, ಸೌಂದರ್ಯ ವರ್ಧನಾ ತಜ್ಞರು (ಬ್ಯುಟಿಪಾರ್ಲರು) ಜೆರಾಕ್ಸ ಪ್ರಿಂಟರರು, ಬ್ಲಾಕ್ ಮೇಕರ್ಸ, ಶಿಲ್ಪಕಲಾ ತಜ್ಞರು, ಕಸೂತಿ ತಜ್ಞರು, ನೇಕಾರರು, ಪತ್ತಾರರು, ಬಡಿಗರು, ಶಿಂಪಿಗರು, ಬಣ್ಣಗಾರರು, ಜಿನಗಾರರು. ನೀಲಗಾರರು, ಗೌಂಡಿಗ ಅಲ್ಲದೆ ಎಲ್ಲ ಪ್ರಕಾರದ ಮಾಲಕರ ಮನೆ, ಚಾಳ, ಟಾಕೀಜ ಗಿರಣಿ, ಕಾರಖಾನೆ, ವಾಹನಗಳ ಮಶಿನರಿಗಳ ಮಾಲಕ ವೃತ್ತಿಯವರ ವಿಷಯವಾಗಿ, ನಗರಸಭೆ, ಜಿಲ್ಲಾ ಪರಿಷತ್ತು,ಮಂಡಲಗಳು, ವಿಶ್ವವಿದ್ಯಾಲಯ; ವಿಧಾನಮಂಡಳ. ಸಂಸತ್ತುಗಳ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರ, ರಾಜಕಾರಣಿಗಳ ಜಾತಕ ಹೇಗೆ ಇರುತ್ತವೆ ಎಂಬುದರ ವಿವರಣೆಯೊಂದಿಗೆ ವೃತ್ತಿಗೆ ಸಂಬಂಧಿಸಿದ ಸಮಸ್ಯೆಗಳ ವಿವೇಚನೆಯೂ ಇದೆ. ಒಟ್ಟಿನಲ್ಲಿ ಎಲ್ಲ ಪ್ರಕಾರದ ಸ್ವತಂತ್ರ ವೃತ್ತಿಯವರ ವಿಷಯವಾಗಿ ಸುದೀರ್ಘವಾಗಿ ಸಂಶೋಧನಾತ್ಮಕವಾಗಿ ವಿವರಿಸಿದ ಗ್ರಂಥವು.

## ೮. ಅಧಿಕಾರೀ ಜ್ಯೋತಿಷ್ಯ

ಬೆಲೆ :ರೂ. ೪–೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ವ್ಯಕ್ತಿಗಳಲ್ಲಿಯ ಪ್ರಕಾರಗಳು ಹಾಗೂ ಅವರ ಸ್ವಭಾವ-ನಡೆ-ನುಡಿಗಳು ಹೇಗಿರುವವು, ಫಲ ಜ್ಯೋತಿಷ್ಯ ಶಾಸ್ತ್ರದ ಮೇಲಿರುವ ಆಕ್ಷೇಪಣೆಗಳಿಗೂ ಉತ್ತರ......ಆಧುನಿಕ ಸಮಾಜದಲ್ಲಿ ಬರುವ ಕ್ಲಿಷ್ಟ ಹಾಗೂ ಸೂಕ್ಷ್ಮ ಪ್ರಶ್ನೆಗಳನ್ನು ಜ್ಯೋತಿಷಿಗಳು ಪ್ರತಿನಿತ್ಯವೂ ಹೇಗೆ ಎದುರಿಸಬೇಕಾಗುತ್ತದೆ ಎಂಬುದರ ನೋಟ... ...

ಜ್ಯೋತಿಷಿಯು ತನ್ನ ವೃತ್ತಿಯಲ್ಲಿ ಯಶಸ್ವಿಯಾಗಲು ಯಾವ ಆದರ್ಶಗಳನ್ನು ಪಾಲಿಸಬೇಕು, ಎಂತಹ ವ್ಯಕ್ತಿತ್ವವನ್ನು ಹೊಂದಿರಬೇಕು, ಇರಬೇಕಾದ ಗುಣಗಳು. ಪಾಲಿಸಬೇಕಾದ ನಿಯಮಗಳು ಯಾವವು ಈ ಮೊದಲಾದ ವಿಷಯಗಳನ್ನು ಕುರಿತು ಸುದೀರ್ಘವಾಗಿ ವಿವರಿಸಲಾಗಿದೆ.

## ೯. ಆರೋಗ್ಯ ಜ್ಯೋತಿಷ್ಯ

ಬೆಲೆ : ರೂ. ೧೨–೦೦ (ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ಜಾತಕ ನೋಡಿ, ಜಾತಕನಿಗೆ ಯಾವ ಯಾವ ರೋಗಗಳು ಯಾವ ಯಾವಾಗ ಬರುವವು ? ಹಾಗು ಬಂದ ರೋಗಗಳು ಗುಣಮುಖವಾಗುವುದು ಯಾವಾಗ ? ರೋಗ ನಿದಾನದ ವಿಧಿ-ವಿಧಾನಗಳೇನು ? ಔಷಧ ಸೇವಿಸುವ ಕಾಲ, ಶಸ್ತ್ರಚಿಕಿತ್ಸೆಗಾಗಿ ಉತ್ತಮ ಮುಹೂರ್ತಗಳು ಇವೇ ಮುಂತಾಗಿ ರೋಗಿ-ರೋಗ-ಆಯುಷ್ಯ, ದುರ್ಮರಣಾದಿಗಳನ್ನು ಕುರಿತು ಸುದೀರ್ಘವಾಗಿ ಸವಿವರವಾಗಿ ಬರೆಯಲ್ಪಟ್ಟ ಕನ್ನಡದಲ್ಲಿಯೇ ಪ್ರಪ್ರಥಮವಾದ ಸಂಶೋಧನಾ ಗ್ರಂಥವಿದು. ಅಲ್ಲದೆ ರೋಗಗಳ ವಿಷಯವಾಗಿ ಸವಿಸ್ತಾರ ಜ್ಯೋತಿಷ್ಯ ಶಾಸ್ತ್ರ ಪ್ರಕಾರದ ವಿವೇಚನೆ ನಡೆಸಿದುದು ಈ ಗ್ರಂಥದ ವೈಶಿಷ್ಟ್ಯ.

## ೧೦. ಶಿಕ್ಷಣ ಜ್ಯೋತಿಷ್ಯ

ಬೆಲೆ : ರೂ. ೧೫–೦೦ (ದ್ವಿತೀಯ ಆವೃತ್ತಿ )

ಜಾತಕಗಳ ಮೇಲಿಂದ ಶಿಕ್ಷಣದ ವಿಚಾರ, ಶಿಕ್ಷಣದಲ್ಲಿಯ ಅಡತಡೆಗಳ ಸುದೀರ್ಘ ವಿಶ್ಲೇಷಣೆ, ಭಾರತದಲ್ಲಿರುವ ಸುಮಾರು ಎಂಟತ್ತು ವಿಧದ

ಶಿಕ್ಷಣ ಕೋರ್ಸುಗಳ ಸವಿಸ್ತಾರ ವಿವರಣೆ, ಪದವಿ, ಸ್ನಾತಕೋತ್ತರ ಪದವಿ, ಡಿಪ್ಲೊಮಾ, ಸರ್ಟಿಫಿಕೇಟ್ ಕೋರ್ಸು ಮುಂತಾದವನ್ನು ಎಂಥ ಜಾತಕನು ಅಳವಡಿಸಿಕೊಳ್ಳಬಹುದು ? ಥೇರಿ, ಪ್ರಾತ್ಯಕ್ಷಿಕ, ಮೌಖಿಕ, ಬೋರ್ಡ ಹಾಗೂ ವಿಶ್ವವಿದ್ಯಾಲಯ, ಸ್ಪರ್ಧಾತ್ಮಕ ಮುಂತಾದ ವಿವಿಧ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಜಾತಕ ಹೇಗಿರಬೇಕು ? ಇತ್ಯಾದಿಯಾಗಿ ವಿದ್ಯಾರ್ಥಿಗಳ ಅಗು ಹೋಗಿನ ಮೇಲೆ ಬೆಳಕುಬೀರುವ ಪ್ರಪ್ರಥಮ ಸಂಶೋಧನಾತ್ಮಕ ಗ್ರಂಥ.

## ೧೧. ಶಕುನ ಜ್ಯೋತಿಷ್ಯ

ಬೆಲೆ : ರೂ. ೧೫-೦೦

ಈ ಗ್ರಂಥದಲ್ಲಿ ಶಕುನ ಶಾಸ್ತ್ರದ ಉತ್ಪತ್ತಿ. ಪ್ರಾಣಿಗಳಿಂದ ಶಕುನಗಳ ವಿಚಾರ, ಸಾಕುಪ್ರಾಣಿಗಳ ಕಾಲ್‌ಗುಣ ಹಾಗೂ ಲಕ್ಷಣಗಳ ವಿಚಾರ, ಪಕ್ಷಿಗಳಿಂದ ಶಕುನಗಳ ವಿಚಾರ, ಕೀಟಗಳಿಂದ ಶಕುನಗಳ ವಿಚಾರ, ಶೀನಿನ ಶಕುನಗಳು, ಜನನ-ಮರಣಗಳ ಶಕುನಗಳು, ಮಳೆ ಹಾಗೂ ಜಲಶಿಲ್ಪಿಯ ಶಕುನಗಳು, ಉಪ್ಪಿನ ಶಕುನಗಳು, ಅಂಗಾಂಗಗಳ ಶಕುನಗಳ ವಿಚಾರ, ಪಾಶ್ಚಿಮಾತ್ಯರಲ್ಲಿಯ ಶಕುನಗಳ ವಿಚಾರ, ಪ್ರವಾಸ ಕೈಕೊಳ್ಳುವ ಸಮಯದಲ್ಲಿಯ ಶಕುನಗಳು, ರೂಢಿ, ನಂಬಿಕೆ, ಪ್ರವಾಸ ಸಂಪ್ರದಾಯಗಳ ವಿಚಾರ ಸ್ವಪ್ನಗಳ ಶಕುನಗಳು ಹೀಗೆ ಶಕುನ ವಿಷಯವಾಗಿ ಸುದೀರ್ಘವಾಗಿ ಸವಿವರವಾಗಿ ಬರೆಯಲ್ಪಟ್ಟ ಕನ್ನಡದಲ್ಲಿಯೇ ಪ್ರಪ್ರಥಮವಾದ ಸಂಶೋಧನಾತ್ಮಕ ಗ್ರಂಥವಿದು.

## ೧೨. ಚುನಾವಣೆಯ ಜ್ಯೋತಿಷ್ಯ

ಬೆಲೆ : ರೂ. ೧೫-೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ಚುನಾವಣೆಯಲ್ಲಿಯ ಸೋಲು-ಗೆಲವುಗಳನ್ನು ವಿಶ್ಲೇಷಿಸುವಾಗ ಅಭ್ಯರ್ಥಿಗಳ ಪ್ರಭಾವ, ಆರ್ಥಿಕ ಬಲ, ಹಿಂದಿನ ಸಾಧನೆ, ಸ್ಥಳೀಯ-ರಾಷ್ಟ್ರೀಯ ಸಮಸ್ಯೆಗಳ ಪ್ರಭಾವ ಮೊದಲಾದ ಚುನಾವಣೆಯ ಸಮಯದಲ್ಲಿ ಇರುವ ಸಮಸ್ಯೆಗಳನ್ನು ಜ್ಯೋತಿಷ್ಯ ದೃಷ್ಟಿಯಿಂದ ವಿವೇಚಿಸಲಾಗಿದೆಯಲ್ಲದೆ, ರಾಜಕೀಯ, ಸ್ಥಾನಿಕ, ಶೈಕ್ಷಣಿಕ, ಸಹಕಾರ, ಸಾಂಸ್ಕೃತಿಕ, ಧಾರ್ಮಿಕ, ಕಾರ್ಮಿಕ ವೃತ್ತಿ ಸೇವಾ ಸಂಘ-ಸಂಸ್ಥೆ ಮೊದಲಾದ ಎಲ್ಲ ಬಗೆಯ ಚುನಾವಣೆಯ ಪ್ರಕಾರಗಳನ್ನು ವಿವೇಚಿಸಿ, ಚುನಾವಣೆಯ ಪೂರ್ವ ಹಾಗೂ ನಂತರದ ಸಮಸ್ಯೆಗಳಾದ— ಯಾವ ಪಕ್ಷದಿಂದ ಸ್ಪರ್ಧಿಸಬೇಕು ?

ಇಚ್ಛಾನುಸಾರದ ಪಕ್ಷದ ಟಿಕೇಟು ಲಭಿಸಬಹುದೇ ? ಸ್ಪರ್ಧೆಯಲ್ಲಿಯ ಬಗೆ, ಆಯ್ಕೆಯಲ್ಲಿಯ ಪ್ರಕಾರ, ಚುನಾವಣಾ ಕಟಿ, ಪಕ್ಷಾಂತರದ ಅವಕಾಶ, ಅಧಿಕಾರ, ಸ್ಥಾನ ಯಾರಿಗೆ ಲಭಿಸುವದು—ಇವೇ ಮೊದಲಾದ ವಿಷಯ ಗಳನ್ನು ವಿವೇಚಿಸಿರುವದಲ್ಲದೆ ೧೮೯೫ರಿಂದ ೧೯೫೫ ರೊಳಗೆ ಜನಿಸಿದ ವ್ಯಕ್ತಿಗಳ ಚುನಾವಣೆ ಹೇಗಾಗುತ್ತದೆ, ಹಾಗೂ ಮುಂಬರುವ ಇಪ್ಪತ್ತು ವರುಷಗಳ ಕಾಲ ಯಾವ ರಾಶಿಯವರಿಗೆ ಹೇಗಿದೆ ? ಇತ್ಯಾದಿ ಚುನಾವಣೆಗೆ ಸಂಬಂಧಿಸಿದ ವಿಷಯಗಳ— ಮಾದರಿ ಜಾತಕದೊಂದಿಗೆ—ಸುದೀರ್ಘ ವಿಶ್ಲೇಷಣೆಯ ಪ್ರಪ್ರಥಮ ಸಂಶೋಧನಾತ್ಮಕ ಗ್ರಂಥವಿದು.

## ೧೪. ಪಂಚಾಂಗ ಪ್ರದೀಪ

ಬೆಲೆ: ರೂ. ೧೦ (ಚತುರ್ಥ ಆವೃತ್ತಿ)

ಹಿಂದೂ ಜೀವನದ ಅವಿಭಾಜ್ಯ ಅಂಗವಾದ ಪಂಚಾಂಗದ ಕೈಪಿಡಿ ಇದು. ಈ ಪುಸ್ತಕದಲ್ಲಿ ಪಂಚಾಂಗವನ್ನು ಹೇಗೆ ನೋಡಬೇಕು ? ತಿಥಿಗಳನ್ನು ನಿರ್ಣಯಿಸುವುದು ಹೇಗೆ ? ನಿತ್ಯ ನಕ್ಷತ್ರ ಹೇಗೆ ಕಂಡುಹಿಡಿಯಬೇಕು ? ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೧೫. ಗ್ರಹಗತಿ

ಬೆಲೆ : ರೂ. ೫-೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ಗ್ರಹಗಳ ಗೋಚರ ಫಲಗಳಾವವು ? ಗ್ರಹಗತಿಯನ್ನು ಹೇಗೆ ನೋಡಬೇಕು ? ವೃತ್ತಪತ್ರಿಕೆಯಲ್ಲಿಯ ನಿಯತಕಾಲಿಕ ರಾಶಿ ಭವಿಷ್ಯವನ್ನು ಹೇಗೆ ಬರೆಯುವರು ? ಹೇಗೆ ಬರೆಯಬೇಕು ? ವೃತ್ತಪತ್ರಿಕೆಗಳಲ್ಲಿಯ ಭವಿಷ್ಯಗಳ ವಿಭಿನ್ನತೆಗೆ ಕಾರಣಗಳೇನು ? ಆಯಾ ರಾಶಿಯವರಿಗೆ ಶುಭಾಶುಭ ಅವಧಿಗಳು ಪ್ರತಿ ವರ್ಷ ಯಾವವು ? ಈ ಮೊದಲಾದ ಗ್ರಹಗಳ ಗೋಚರ ಫಲಗಳ ವಿಷಯವಾಗಿ ವಿವೇಚಿಸಿದ ಪುಸ್ತಕ.

## ತೀವ್ರ ಪ್ರಕಟವಾಗಲಿರುವ ನಕ್ಷತ್ರಗಳು

ಪರಿಹಾರ ಜ್ಯೋತಿಷ್ಯ (ಅಚ್ಚಿನಲ್ಲಿ) ಗ್ರಹದರ್ಶನ
ಗ್ರಹಯೋಗ ದಶಾದರ್ಪಣ ಕುಂಡಲಿ ಸಂಗ್ರಹ
ಶರೀರ ಲಕ್ಷಣ ಜ್ಯೋತಿಷ್ಯ ಪ್ರಸೂತಿ ಜ್ಯೋತಿಷ್ಯ
ಕುಂಡಲಿ ಗುಣನಿರ್ಣಯ (ಅಚ್ಚಿನಲ್ಲಿ)